# ಓಹಿಯೋಜ ಸರೋವರ

ಮಲ್ಲಿಕಾ

ನೀನೆನಿತು ಕಲಿತೊಡಂ
ಗುರುವಿಲ್ಲದೆ ತಿಳಿಯಲಾರೆ
ನೀನೆನಿತು ಶ್ರಮಿಸಿದೊಡಂ
ಭಾವವಿಲ್ಲದೆ ಬಲಿಯಲಾರೆ

Ohiyoja Sarovara in Kannada by 'Mallika'
Published by Lakshmi Prakashana,
7, Langford Road, Bangalore-560 025.

ಪ್ರಥಮ ಮುದ್ರಣ : ೧೯೮೭



ಬೆಲೆ : ಆರು ರೂಪಾಯಿ

ಮುದ್ರಕರು :

ನ್ಯೂ ಐಡಿಯಾಸ್
30, 15ನೇ ಅಡ್ಡರಸ್ತೆ
ಮೂರನೆಯ ವಿಭಾಗ ಜಯನಗರ
ಬೆಂಗಳೂರು-560 011

“ಶ್ರೀವಿನಾಯಕಪಾದಾರ್ಪಣಮಸ್ತು”

# ಓಹಿಯೋಜ ಸರೋವರ

ಮಲ್ಲಿಕಾ

ಲಕ್ಷ್ಮೀ ಪ್ರಕಾಶನ
7, ಲ್ಯಾಂಗ್ ಫೋರ್ಡ್ ರೋಡ್
ಬೆಂಗಳೂರು–560 025

# ಪರಿವಿಡಿ

# ನಿವೇದನೆ

ಇಂದಿನ ವಿದ್ಯಾಕ್ಷೇತ್ರಕ್ಕೆ ಮಕ್ಕಳ ಸಾಹಿತ್ಯದ ಕೊರತೆ ಅಪಾರ. ಉತ್ತಮ ಗ್ರಂಥಗಳ ಸಂಖ್ಯೆ ಹುಟ್ಟಿ ಬೆಳೆಯಬೇಕು-ಬೆಳೆಸಬೇಕು. ಹೇಗೆ ? ನಾವು-ಲೇಖಕರು ಒಂದೆರಡು ಸಾವಿರ ಪ್ರತಿಗಳನ್ನು ಪ್ರಕಾಶಿಸುವುದರಲ್ಲೇ ಸುಸ್ತು. ಪ್ರಸ್ತುತ, ಲಕ್ಷೋಪಲಕ್ಷ ಮಕ್ಕಳ ಕೈಗೆ ಇವು ಮುಟ್ಟುವುದಾದರೂ ಎಲ್ಲಿ? ಈ ದಿಶೆಯಲ್ಲಿ ಸರಕಾರ ಮುಂದೆ ಬಂದು ಅತ್ಯುತ್ತಮ ಗ್ರಂಥಗಳ ಪ್ರಕಾಶನಕ್ಕೆ ಭುಜಕ್ಕೆ ಭುಜ ಕೊಟ್ಟರೆ ಕೊರತೆ ತುಂಬುತ್ತದೆ.

ಮಕ್ಕಳ ಮನಸ್ಸು ದಳದಳ ಅರಳಬೇಕಾದರೆ ಸತ್ವಯುತ ಸಾಹಿತ್ಯ ಕೈತುಂಬ ಒದಗಿಸಬೇಕು. ಬರೀ ಶಾಲಾ ಪುಸ್ತಕಗಳೇ ಆದರೆ ಓದುವ ಅಭಿರುಚಿ ಹಿಂಗುವುದು ಸಹಜ. ಪ್ರಾಣಿ ಪಕ್ಷಿಗಳ ಕತೆಗಳು ಮನೋರಂಜಕ ಮತ್ತು ಸ್ಫೂರ್ತಿದಾಯಕವಾಗುವುದರಿಂದ ಓದುವುದರಲ್ಲಿ ಆಸಕ್ತಿ ಹುಟ್ಟಿಸುವುದಕ್ಕೆ ಕಥಾ ಜಗತ್ತು ತುಂಬ ಉಪಯುಕ್ತ.

ಮಲ್ಲಿಕಾ

17-7-1987

# ಓಹಿಯೋಜ ಸರೋವರ

ಅದೊಂದು ಬೃಹತ್ ಸಭೆ.

ದೇಶೀಯ ಉಡುಪಿನ ಕ್ವಾಜಾ ಜನಾಂಗ. ಮಟ್ಟಸ ದೇಹದ ಕಟ್ಟಾಳುಗಳ ಒಕ್ಕೂಟ.

ಕರಿಯ ಕಂಬಳಿಯಂತಹ ದಪ್ಪ ಉತ್ತರೀಯವನ್ನು ಮೈಗೆ ಸುತ್ತಿ ತಲೆಗೆ ಕೆಂಪು ಟೊಪ್ಪಿಗೆ ಧರಿಸಿದ್ದರು. ಊರ ಬಯಲಿನ ಮರಗಳು ಎಲೆ ಉದುರಿ ಬರಲು ಬರಲಾಗಿವೆ. ಎಲ್ಲಿಯೂ ನೆರಳಿರಲಿಲ್ಲವಾದ್ದರಿಂದ ಬಟ್ಟಬಯಲಲ್ಲೇ ಸಭೆ. ಕಳೆದ ಒಂದೆರಡು ವರ್ಷಗಳಿಂದ ಮಳೆಯ ಹೆಸರೇ ಇರಲಿಲ್ಲ. ಗಿಡಮರಗಳು ನಾಶವಾಗಿವೆ. ದನಕರುಗಳು ಸಾಯುತ್ತಿವೆ. ಇನ್ನು ಜನಜಂಗುಳಿ ಸಾಯುವುದೊಂದು ಬಾಕಿ. ದಾಹ, ದಾಹ ! ಕೊನೆಗಾಣದ ದಾಹ ! ರಣರಣಿಸುವ ಬಿಸಿಲು! ಧೂಳು ಧೂಳಾದ ನೆಲ. ಗಾಳಿ ಬೀಸಿತೆಂದರೆ ಮುಖಮೈಗಳಿಗೆ ರಾಚುತ್ತದೆ ಸುಡುಧೂಳು !

ದಿಲ್‌ಓಜಾ (ಪುರೋಹಿತ) ಸಭೆಗೆ ಆಗಮಿಸಿದ. ಅವನು ಬಂದಕೂಡಲೇ ಎಲ್ಲರೂ ಎದ್ದುನಿಂತು ಸ್ವಾಗತಿಸಿದರು. ಅವನು ಮಣ್ಣಿನ ದಿಬ್ಬದ ಮೇಲೆ ನಿಂತು ಸ್ಫೂರ್ತಿಯಿಂದ ಹಿಂದಿನ ಪುರಾಣೇತಿಹಾಸಗಳ ಅನೇಕ ಸಂಕಟಕಾರಕ ವಿಚಾರಗಳನ್ನು ಸಭೆಗೆ ವಿವರಿಸಿ ಎಂತಹ ಪ್ರಸಂಗದಲ್ಲೂ

ಎದೆಗೆಡಬಾರದೆಂದು ವಿನಂತಿಸಿ ಮುಂದುವರಿದ "ಮಳೆಬೆಳೆಯಿಲ್ಲದೆ ಇಡೀ ದೇಶ ಒಣಗುತ್ತಿದೆ. ಓಹಿಯೋಜ ಸರೋವರ ಇನ್ನೊಂದು ವಾರದೊಳಗಾಗಿ ಒಂದು ಹನಿ ನೀರೂ ಉಳಿಯದಂತೆ ಬತ್ತಿಹೋಗುವುದು ಖಂಡಿತ. ನಮ್ಮ ಜನಾಂಗದಲ್ಲಿ ಯಾರಿಗೆ ಒಬ್ಬಳೇ ಮಗಳಿದ್ದಾಳೋ ಅವಳನ್ನು ಪವಿತ್ರ ಓಹಿಯೋಜ ಸರೋವರಕ್ಕೆ ಬಲಿಕೊಟ್ಟರೆ ಮಳೆ ಬರುವುದೆಂದು ಸ್ವರ್ಗದ ಜಾವೊಂಗಾ ದೇವತೆ ಕನಸಿನಲ್ಲಿ ನನಗೆ ಅಪ್ಪಣೆ ಮಾಡಿದ್ದಾಳೆ. ಆದ್ದರಿಂದ ಇಂದು ನಾಳೆ ಜಾವೊಂಗಾ ದೇವತೆಗೆ ಪೂಜೆ ಪುರಸ್ಕಾರ ಸಲ್ಲಿಸಿ ಕನ್ಯೆಯನ್ನು ಬಲಿಕೊಡಬೇಕು !"

ಆ ಜನಾಂಗದಲ್ಲಿ ಆಗಾಗ ಇಂತಹ ಪ್ರಸಂಗಗಳು ನಡೆಯುತ್ತಲೇ ಇರುತ್ತವೆ. ಆದ್ದರಿಂದ ಅದು ಯಾರಿಗೂ ಹೊಸದಲ್ಲ. ಯಾರಿಗೆ ಒಬ್ಬಳೇ ಮಗಳು ಇದ್ದಾಳೋ ಅವರಿಗೆ ಮಾತ್ರವಷ್ಟೆ ಸಂಕಟ-ಗೋಳು-ದುಃಖ.

* * * *

ಆ ಹಳ್ಳಿಯ ಸರದಾರನಿಗೆ ಜನಾಂಗದ ಹೊಣೆಗಾರಿಕೆ ಯಾವತ್ತೂ ಇದ್ದದ್ದೇ ಅಲ್ಲದೆ ಅವನಿಗೆ ಇದ್ದುದು ಒಬ್ಬಳೇ ಮಗಳು, ಹದಿಮೂರು ವರ್ಷ. ಅವಳನ್ನು ಕೈಹಿಡಿಯಲು ಆಗಲೇ ಇಬ್ಬರು ಹುಡುಗರು ಮುಂದೆ ಬಂದಿದ್ದಾರೆ. ಸರದಾರ ಲಾಂಬೋಗೀ-ಗೆ ಮಗಳನ್ನು ಈ ವರ್ಷ ಮದುವೆ ಮಾಡುವ ಇಚ್ಛೆಯಿತ್ತು. ಆದರೆ ಇಂದಿನ ಭಯಂಕರ ಪರಿಸ್ಥಿತಿಯಿಂದ ಪಾರಾಗುವ ಗತಿಯಿಲ್ಲ. ಮಗಳ ಮುದ್ದು ಮುಖವನ್ನು ನೆನೆಸಿಕೊಂಡು ಲಾಂಬೋಗೀ ಜೋರಾಗಿ ಅತ್ತ. ಆದರೂ ಜನಾಂಗದ ಹೊಣೆಗಾರಿಕೆಯೆಂದರೆ ಸಾಮಾನ್ಯವಲ್ಲ.

ಕೈಬಾಯಿ ಹೆಡೆಮುರಿಗಟ್ಟಿಸಿದಷ್ಟು ಬಿಗಿ. ಹೇಳಲಾರ, ಅನುಭವಿಸಲಾರ. ಮೈ ಸಿಡಿದೊಡೆಯುವಂತಹ ದಡಾಕಿಯೇ ಸೈ. ಸಂಗಡಿಗರು ಮತ್ತು ಜನಾಂಗದ ಮುಖ್ಯಸ್ಥರು ಅವನಿಗೆ ಸಮಾಧಾನದ ಮಾತುಗಳನ್ನು ಹೇಳಿದರು. "ನೀನು ಸರದಾರನಾಗಿ ಹೊಣೆಗಾರಿಕೆಯನ್ನು ತಪ್ಪಿಸಿಕೊಳ್ಳಲಾರೆ. ಇಂದು ನಾಳೆಯೊಳಗಾಗಿ ದೇವತೆಯ ಪೂಜೆ ಪುರಸ್ಕಾರಗಳನ್ನು ಮಾಡಿ ಸತ್ಕರಿಸದೆ ಹೋದರೆ ನಿನ್ನ ಒಬ್ಬ ಮಗಳಿಗೆ ಪ್ರತಿಯಾಗಿ ಇಡೀ ಜನಾಂಗವೇ ಸಾಯುವುದನ್ನು ನೋಡಬೇಕಾಗುತ್ತದೆ. ನೀನಿದನ್ನು ಯೋಚಿಸಿ ನೋಡು ಲಾಂಬೋಗೀ !"

ಸರದಾರ ಲಾಂಬೋಗೀ ಕಳೆದೆರಡು ವರ್ಷಗಳಿಂದ ಸ್ವರ್ಗದ ಜಾವೊಂಗಾ ದೇವತೆಯಲ್ಲಿಯೂ ಓಹಿಯೋಜ ಸರೋವರದ ಕಿನ್ನರಿಯಲ್ಲಿಯೂ ಪ್ರಾರ್ಥಿಸಿಕೊಂಡುದುದು ಕಡಿಮೆಯೇನಲ್ಲ. ಕುರಿ-ಕೋಳಿಗಳನ್ನು ಬಲಿಕೊಡುತ್ತಲೇ ಬಂದಿದ್ದ. ಪೂಜೆ ಪುರಸ್ಕಾರಗಳು ನಡೆಯುತ್ತಲೇ ಇದ್ದುವು. ಆದರೂ, ವರುಣ ದೇವತೆ ದಯೆದೋರಲಿಲ್ಲ. ಭೂಮಿ ತಣಿಯಲಿಲ್ಲ. ಪ್ರಾಣಿಗಳು ಯಥೇಚ್ಛವಾಗಿ ಪ್ರಾಣಬಿಟ್ಟುವು. ಇನ್ನೂ ಬಿಡುತ್ತಲೇ ಇವೆ.

* * * *

ದಿಲ್‌ಓಜಾ ಇದುವರೆಗೆ ಏನೇನು ಭವಿಷ್ಯ ಹೇಳಿದ್ದಾನೋ ಅದೆಲ್ಲಾ ಸರಿಯಾದುದೇ. ಅದರಲ್ಲಿ ಹಿಂದು ಮುಂದಾದಿಲ್ಲ. ಅವನ ಮಾತಿಗೆ ತಪ್ಪಿನಡೆಯುವ ಎದೆಗಾರಿಕೆ ಯಾರಿಗೂ ಇಲ್ಲವೇ ಇಲ್ಲ. ಸ್ವರ್ಗದ ಜಾವೊಂಗಾ ದೇವತೆ ಹೇಳಿದ್ದಾಳೆಂದಮೇಲೆ ಮುಗಿಯಿತು. ಒಂದುವೇಳೆ ಮಗಳು ಒಲ್ಲೆನೆಂದರೂ ಕಳೆಯದು. ಇಡೀ ಜನಾಂಗವೇ ಒಟ್ಟಾಗಿ

ಅವಳನ್ನು ಬಲಿಕೊಡುತ್ತದೆ. ಅಂದಮೇಲೆ, ಇಂದಿನಿಂದಲೇ ಪೂಜೆಯ ಸಿದ್ಧತೆ ನಡೆಯಬೇಕು.

ಆಗಲೇ ಜನ ಒಬ್ಬೊಬ್ಬರು ಒಂದೊಂದು ಹೊಣೆಗಾರಿಕೆಯನ್ನು ಹೊತ್ತು ಪೂಜೆ ನಡೆಸಲು ಸಿದ್ಧರಾಗಿದ್ದಾರೆ. ಜಾವೊಂಗಾ ದೇವತೆಯ ಪೂಜೆ ನಡೆಯುವುದು ಓಹಿಯೋಜ ಸರೋವರದ ಪವಿತ್ರ ಸರಹದ್ದಿನಲ್ಲೇ. ಅಲ್ಲೊಂದು ದೊಡ್ಡ ದೊಡ್ಡ ಮರಗಳ ಗುಂಪು. ಅದರ ತಳದಲ್ಲಿ ಹಾಸುಗಲ್ಲು. ಪವಿತ್ರ ಸರೋವರಕ್ಕೆ ನೀರೆತ್ತಲು ಹೋಗುವ ಮುನ್ನ ಊರಿನ ಮಂದಿ ಅಲ್ಲಿ ಪೂಜೆ ಸಲ್ಲಿಸುತ್ತಾರೆ. ಸರೋವರದ ಹಾದಿಯಾದುದರಿಂದ ಯಾರೂ ಪೂಜೆ ತಪ್ಪಿಸಲಾರರು. ಅಷ್ಟು ಭಕ್ತಿ ! ಅಷ್ಟು ನಂಬಿಕೆ.

* * * *

ಸರದಾರ ಲಾಂಬೋಗೀಯ ಮಗಳು ಮಿರಾಂಡ ತನ್ನ ಗೆಳತಿ ಒಗಾಂಡಳೊಂದಿಗೆ ಗುಡಿಸಿಲಿನಲ್ಲಿ ಕುಳಿತು ಚೆನ್ನೆಯಾಟದಲ್ಲಿ ಪಾಲ್ಗೊಂಡು ಸಂತಸದಿಂದ ಹೊತ್ತು ಕಳೆಯುತಿದ್ದರೂ ಒಮ್ಮೊಮ್ಮೆ ಆ ಸಭೆಯ ಕಡೆ ಗಮನ ಹರಿಯುತಿದ್ದುದುಂಟು. ಬಯಲ ತುಂಬೆಲ್ಲಾ ಜನ ಸೇರಬೇಕಾದರೆ ಏನೋ ವಿಶೇಷ ಕಾರ್ಯವಿರಬೇಕು ಎಂದೇ ಹೇಳುತ್ತದೆ ಮನಸ್ಸು.

"ನಿನಗ್ಯಾಕೆ ಸಭೆ ಮೇಲೆ ಅಷ್ಟೊಂದು ಕಾತರ ? ಹೋದವರ್ಷ ನನ್ನ ಮದುವೆಯ ಮಾತುಕತೆಯಾಡಿದ್ದೂ ಇಂತಹ ಸಭೆಯಲ್ಲೇ. ಬಹುಶಃ, ಈ ಸಲಿ ನಿನ್ನ ಮದುವೆಯ ಮಾತುಕತೆ ನಡೆದಿರಬಹುದು ;" ಎಂದಳು ಒಗಾಂಡ ಕಣ್ಣುಗಳನ್ನು ಮಿಟುಕಿಸಿ.

"ಏ! ಕಳ್ಳಿ. ನನ್ನ ಮದುವೆ ಮಾತುಕತೆಗೆ ನಾರ್ಗ್ಗಾಸಾಕಿ ಇಲ್ಲಿಲ್ಲವಲ್ಲಾ ; ಅವನು ಬರುವುದು ಯಾವಾಗಲೋ...ಸುಮ್ಮನೆ ನನ್ನ ಛೇಡಿಸುವುದಕ್ಕೆ ಹೇಳುತಿದ್ದಿ !"

"ಅಲ್ಲ, ಮಿರಾಂಡಾ. ನಾರ್ಗ್ಗಾಸಾಕಿ ಇಂದು ನಾಳೆಯೊಳಗಾಗಿ ಬಂದಾನೇನೋ...ಒಂದುವೇಳೆ ಬರದಿದ್ದರೂ ಬಾಧಕವಿಲ್ಲ. ಅವನ ಬೆಳ್ಳಿ ಚೈನು ಹಿಂದಿರುಗಿಸಿ ಬೇರೆ ಯಾರಿಗಾದರೂ ಮಾಡುತ್ತಾರೆ. ಇನ್ನೊಬ್ಬ ನಿನ್ನ ಮನೆಗೆ ಹೋಗಿ ಬರುತಿದ್ದನಲ್ಲಾ, ಆ ಚಾವ್ರೊಂಗ್ ಇನ್ನೂ ಕಾದೇ ಇದ್ದಾನೆ. ಅಂದಮೇಲೆ ಯಾರಿಗಾದರೂ ಕೊಟ್ಟು ಮದುವೆ ಯಾಗುತ್ತೆ. ಸರದಾರ ಒಪ್ಪಿದ ಮೇಲೆ ಮುಗಿಯಿತಲ್ಲ. ಸರದಾರ ಚಿಕ್ಕಪ್ಪನಿಗೆ ನಾರ್ಗ್ಗಾಸಾಕಿಗಿಂತ ಚಾವ್ರೊಂಗ್ ಮೇಲೆಯೇ ಹೆಚ್ಚು ಪ್ರೀತಿ. ನೀನು ಬೇಕಾದರೆ ತಿಳಿದು ನೋಡು."

"ನನಗೇನೋ ನಾರ್ಗ್ಗಾಸಾಕಿ ತುಂಬಾ ಮೆಚ್ಚಿಗೆ. ಅವನಲ್ಲದಿದ್ದರೆ ನನಗೆ ಮದುವೆಯೇ ಬೇಡ ಅಂದೇನು !" ದೃಢ ಕಂಠದಿಂದ ನುಡಿದಳು ಮಿರಾಂಡ.

"ಓಹೋಹೋ ! ಇದನ್ನೆಲ್ಲಾ ಪ್ರತಿಷ್ಠಿತರು ಒಪ್ಪುತ್ತಾರೆಯೇ ?"

"ಏಕೆ ? ಒಪ್ಪದಿರುವಂತಹ ಕಾರಣ ಏನಿದೆ ?"

"ನಿನ್ನ-ನನ್ನ ಕಾರಣ ಕೇಳುತ್ತಾರೆಯೇ ?"

"ನಾರ್ಗ್ಗಾಸಾಕಿ ಬಂದರೆ ಅವನೊಂದಿಗೆ ಓಡಿಹೋಗಲೂ ಸಿದ್ಧ !"

"ಪರವಾಯಿಲ್ಲ. ನೀನು ಧೈರ್ಯವಂತೆ !"

"ಮತ್ತೆ, ಅವನು ನನಗೆ ಬೆಳ್ಳಿ ಚೈನು ಕೊಡಲಿಲ್ಲವೇ?"

ಆ ಮಾತಿಗೆ ತಲೆದೂಗಿ ಸಮ್ಮತಿ ಸೂಸಿದಳು ಒಗಾಂಡ. ತುಟಿಗಳಲ್ಲಿ ನಸುನಗೆ ಸೂಸಿ ಪ್ರಸನ್ನ ಮುಖಿಯಾದ ಮಿರಾಂಡ ಹುಬ್ಬೇರಿಸಿದಳು.

*　　　*　　　*　　　*

ಆ ದಿನವೆಲ್ಲಾ ಸರದಾರ ಲಾಂಬೋಗಿ ಮನದಲ್ಲೇ ಪರಿತಪಿಸಿದ. ಮಡದಿ ಮತ್ತು ಮಗಳಿಗೆ ಯಾವೊಂದು ವಿಷಯವನ್ನೂ ತಿಳಿಸಲಿಲ್ಲ. ದಿಲ್‌ಓಜಾ ಅಪ್ಪಣೆ ಕೊಡಿಸಿದ ಮೇಲೆ ಮುಗಿಯಿತು. ಅದನ್ನು ತೆಗೆದು ಹಾಕುವುದು ಯಾರಿಂದಲೂ ಸಾಧ್ಯವಿಲ್ಲ. ಕ್ವಾಜಾ ಜನಾಂಗದ ಹಿರಿಯನಾದ ನಾಸಾಕಿಯ ಮಾತೂ ನಡೆಯದು. ಈಗ ಪ್ರೋದೋಹೀ ಸಹ ಏನೂ ಮಾಡಲಾರ. ಇಬ್ಬರೂ ಹಿರಿಯರೇ. ಅನೇಕ ಸಂದರ್ಭಗಳಲ್ಲಿ ಅವರ ಮಾತು ನಡೆಯುತ್ತದೆ. ಈ ಸಲಿ ಅವರು ನಿಸ್ಸಹಾಯಕರು. ಅಂದಮೇಲೆ, ನನ್ನ ಜನಾಂಗದ ಹೊಣೆಗಾರಿಕೆ ಸರದಾರನಾಗಿ ನಾನು ಹೊರಲೇ ಬೇಕು. ಇಂಥ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ನಾನು ಏನೂ ಮಾಡಲಾರೆ. ಇದು ತೀರಾ ದುರದೃಷ್ಟಕರ...ಎಂದು ತನ್ನಲ್ಲೇ ಗೋಳಾಡಿದ.

ಓಹಿಯೋಜ ಸರೋವರದ ಕಿನ್ನರಿಗಾಗಿ ಬಲಿಯಾಗುವ ಹೆಣ್ಣಿಗೆ ತರತರದ ಅಲಂಕಾರ ವಿವಿಧ ತಿಂಡಿ ತಿನಿಸುಗಳ ಔತಣ ನೀಡುವುದು ಜನಾಂಗದ ಪದ್ಧತಿ. ಆದ್ದರಿಂದ ಅಂದು ಮನೆ ಮನೆಯಲ್ಲೂ ತಿಂಡಿ ತಿನಿಸುಗಳ ತಯಾರಿಕೆ ನಡೆದಿತ್ತು. ಎಲ್ಲರಿಗೂ ಹಬ್ಬದ ಸಂಭ್ರಮ.

ಇನ್ನು ಮಳೆಬಂದೇ ತೀರುವುದೆಂಬ ಹರುಷ ಉಕ್ಕೇರಿತು. ಎಲ್ಲರೂ ಕುಣಿದು ಕುಪ್ಪಳಿಸಿ ಮಳೆ ಹಾಡು ಹಾಡಿದರು ಕೈ ಚಪ್ಪಾಳೆ ತಟ್ಟುತ್ತ.

ಸರದಾರ ಲಾಂಬೋಗೀ ಗುಡಿಸಿಲಿನ ಮೂಲೆಯಲ್ಲಿ ಬಿದ್ದುಕೊಂಡೇ ತನ್ನವರ ಸಂಭ್ರಮ–ಸಂತೋಷಗಳನ್ನು ಮನಗೊಂಡು ಕೊರಗಿ ಕರಗಿ ಕಣ್ಣೀರು ಕರೆದ. ದಿಂಬು ತೊಯ್ದುಹೋಯಿತು. ಮಗಳು ಮಿರಾಂಡ ಹಿಂದಿನದಿನ ಅಜ್ಜಿಯ ಮನೆಗೆ ಹೋದವಳು ಬಂದೇ ಇರಲಿಲ್ಲ. ಮನೆ ಬಿಕೋ ಎನ್ನುತಿದೆ.

ಅವಳಿಂದು ಬರುವುದೇ ಬೇಡ ; ಅಲ್ಲೇ ಇರಲಿ... ಎಂದು ತನ್ನಲ್ಲೇ ಹೇಳಿಕೊಂಡ ಲಾಂಬೋಗೀ. ಹೃದ್ಗಡಲು ದುಃಖದ ಬೀಡಾಗಿತ್ತು.

* * * *

"ಓಹಿಯೋಜ ಸರೋವರಕ್ಕೆ ನಿನ್ನನ್ನು ಬಲಿಕೊಡುತ್ತಾರಂತೆ ! ನಿನಗೊತ್ತಾ ?"

ಆ ಮಾತು ಕೇಳಿ ಆಶ್ಚರ್ಯ ಚಕಿತಳಾದ ಮಿರಾಂಡ ಸೆಟೆದು ನಿಂತು ಕೇಳಿದಳು,

"ನಾನೇಕೆ ಬಲಿಯಾಗಲಿ ? ಈ ಊರಿನಲ್ಲಿ ಹೆಣ್ಣಿಗೇನು ಕಡಿಮೆ ?"

"ಯಾರಿಗೆ ಒಬ್ಬಳೇ ಮಗಳೋ ಅವಳು ಮಾತ್ರ ಬಲಿಗೆ ಅರ್ಹಳಂತೆ ! ಹಾಗೆ ಎಲ್ಲರು 'ಬಲಿ' ಒಪ್ಪಿಕೊಳ್ಳುವಂತಿಲ್ಲ. ಅಲ್ಲದೆ ಸರದಾರನ ಹೊಣೆಗಾರಿಕೆ ಅಪಾರ !

ಅವನು ಸರದಾರನಾಗಿ ನಿರ್ಲಕ್ಷಿಸುವಂತಿಲ್ಲ. ದಿಲ್‌ಓಜಾ ಬಂದು ಹೇಳಿಹೋಗಿದ್ದಾರೆ! ಓಹಿಯೋಜಾ ಕಿನ್ನರಿ ಕಾಯುತ್ತಿರುತ್ತಾಳೆ!

"ಉಹೂ! ನಾನು ಅಪ್ಪನಿಗೆ ಹೇಳುವೆ!"

ಹಾಗೆಂದು ಹೇಳುವಂತಿಲ್ಲ. ಅದು ನಿನ್ನ ಹೊಣೆಯೂ ಕೂಡ. ನೀನು ಸರದಾರನ ಮಗಳು! ಸರದಾರನಿಗಿರುವಷ್ಟೇ ಹೊಣೆಗಾರಿಕೆ ನಿನಗೂ ಇದೆ. ಸುಮ್ಮನೆ ಮಡಿ ಉಟ್ಟುಕೊ. ಇಂತಹ ಅದೃಷ್ಟ ಯಾರಿಗೆ ಬರುತ್ತೆ ಹೇಳು? ನಿನ್ನ ಹೆಸರು-ಕೀರ್ತಿ ಊರೆಲ್ಲ ಕಸ್ತೂರಿ ಪರಿಮಳದಂತೆ ಪಸರಿಸ್ತುತ್ತದೆ. ಇಡೀ ಜನಾಂಗವನ್ನು ಉಳಿಸುವ ನೀನು ನೇರವಾಗಿ ಸ್ವರ್ಗಕ್ಕೆ ಹೋಗುತ್ತಿ! ಮತ್ತೇಕೆ ಚಿಂತೆ?"

ಸುತ್ತಮುತ್ತಿನ ಮಹಿಳೆಯರೆಲ್ಲಾ ಹಾಗೇದು ಹೇಳುತಿದ್ದರೆ ಆ ಪುಟ್ಟ ಹುಡುಗಿಗೆ ಏನೆಂದು ಹೇಳಬೇಕೊ ತಿಳಿಯದು...ಈಗ ನಾರ್‍ಗಾಸಾಕಿ ಬಂದಿದ್ದರೆ ಎಂದು ಮನದಲ್ಲೇ ಯೋಚಿಸಿದಳು ಮಿರಾಂಡ. ಎರಡೂ ಕಣ್ಣುಗಳಲ್ಲಿ ಕಂಬನಿಗಳು ಹರಿದು ಸೆರಗು ತೊಯ್ಯಿತು. ಅಜ್ಜಿ-ತಾಯಿ ಬೇರೆ ಗೋಳಾಡುತಿದ್ದಾರೆ. ಇವರಿಗೆ ಇದು ಗೋಳಾದರೂ ಇತರರಿಗೆ ಖುಷಿಯೋ ಖುಷಿ! ಇನ್ನು ಮಳೆ ಬಂದೇ ಬರುತ್ತೆ ಎಂಬ ಸಮಾಧಾನ-ಸಂತೃಪ್ತಿ-ಸಂತೋಷ! ಸಂತೋಷವೇ ಸಂತೋಷ!

"ನೀನು ಓಹಿಯೋಜ ಕಿನ್ನರಿಯ ಮಗಳು ಕಣೆ!" ಎಂದಳು ಒಗಾಂಡ ಅವಳ ಕೈ ಹಿಡಿದುಕೊಂಡು.

* * * *

ಕ್ವಾಜಾ ಜನಾಂಗವೆಲ್ಲ ತಮ್ಮ ತಮ್ಮ ಕೈಯಲ್ಲಾದ ತಿಂಡಿ ತಿನಿಸು ಮಾಡಿತಂದಿದ್ದಾರೆ. ಪಾಪ! ಆ ಹುಡುಗಿ ಏನು ತಿಂದಾಳು? ದುಃಖದಿಂದ ಹೊಟ್ಟೆ ತೊಳೆಸುತ್ತಿದೆ. ಮುಸಿ ಮುಸಿ ಅಳುತ್ತಲೇ ಇದ್ದಾಳೆ. ಕೊನೆಗೊಮ್ಮೆ ಈದೇಶಕ್ಕೆ-ಈ ಜನಾಂಗಕ್ಕೆ ನನ್ನಿಂದ ಒಳ್ಳೆಯದಾಗುವಂತಿದ್ದರೆ ನನ್ನ ಸಾವು ಸಾರ್ಥಕ ಎಂದು ತೀರ್ಮಾನಕ್ಕೆ ಬಂದ ಅವಳು ಧೈರ್ಯ ತಾಳಿ ಕೊಂಡಳು. ಹಳದಿ ಪತ್ತಲಪುಟ್ಟು ಕೈಯಲ್ಲಿ ಹೂವು ಹಣ್ಣು ಗಳ ಹರಿವಾಣ ತೆಗೆದುಕೊಂಡು ಎಲ್ಲರಿಗೂ ವಿದಾಯ ಹೇಳಿ ಹೊರಟಾಗ ಮೂಡಣದಲ್ಲಿ ಸೂರ್ಯ ಇಣುಕುತಿದ್ದ. ಎಲ್ಲೂ ಹಕ್ಕಿಗಳ ಸೊಲ್ಲೇ ಇಲ್ಲ. ಯಾವ ಕಡೆ ಒಲಸೆ ಹೋಗಿದ್ದುವೋ...ನಾಯಿಗಳೂ ಅಲ್ಲಲ್ಲಿ ಸೊರಗಿ ಮೈ ಮುದುಡಿವೆ ಹೊಟ್ಟೆ ಬೆನ್ನಿಗೆ ಹತ್ತಿ.

ತಂದೆ, ತಾಯಿ, ಅಜ್ಜಿ ಮತ್ತು ಊರವರೆಲ್ಲಾ ಹಿಂದೆಯೇ ಬಂದು ಸರೋವರದ ತೀರದಲ್ಲಿ ಬೀಳ್ಕೊಟ್ಟು "ಮೊದಲು ಈ ಹರಿವಾಣದಲ್ಲಿರುವ ಹೂ ಹಣ್ಣುಗಳನ್ನು ನೀರಿಗೆ ಅರ್ಪಿಸು. ಅನಂತರ ನೀನು ಬಿದ್ದು ಬಿಡು. ನೀನು ಮುಂದೆ ನಕ್ಷತ್ರವಾಗುತ್ತಿ. ಆಕಾಶದಿಂದ ಎಲ್ಲರನ್ನೂ ನೋಡಬಹುದು. ನೀನೂ ನಮಗೆ ಕಾಣಿಸುತ್ತಿ. ನಾವೂ ನಿನಗೆ ಕಾಣಿಸುತ್ತೇವೆ. ಇದರಲ್ಲಿ ಚಿಂತಿಸಬೇಕಾದುದೇನೂ ಇಲ್ಲ." ಎಂದರು ಒಮ್ಮನದಿಂದ ಮುದ್ದುಮಾಡಿ.

ಮಿರಾಂಡ ಎಲ್ಲರಿಗೂ ಮತ್ತೆ ವಿದಾಯ ಹೇಳಿ ಹೊರ ಟಳು. ರೇಶಿಮೆಯ ಉಡುಪು ಎಳೆ ಬಿಸಿಲಿಗೆ ಮಿರುಗು ತಿತ್ತು. ಆ ಕಾಲುಗಳಿಗೆ ಎಂತಹ ವೇಗ ಬಂದಿತ್ತೋ... ಹುಡುಗಿ ಓಡಿಯೇ ಓಡಿದಳು!

ಎಲ್ಲರೂ ಆಶ್ಚರ್ಯದಿಂದ ನೋಡುತಿದ್ದಾರೆ.

ಆಗಲೇ ಆಕಾಶದಲ್ಲಿ ಮಳೆ ಮೋಡಗಳು ಕಾಣಿಸು ತ್ತಿವೆ. ಸ್ವಲ್ಪೇ ಹೊತ್ತಿನೊಳಗಾಗಿ ಕಾರ್ಮೋಡಗಳು ದಟ್ಟೈಸಿದುವು. ಪುರೋಹಿತ 'ಹೋ!' ಎಂದು ಚಪ್ಪಾಳೆ ತಟ್ಟಿದ. ಬಳಿಕ ಎಲ್ಲರೂ ಚಪ್ಪಾಳೆ ತಟ್ಟಿ ಕುಣಿದರು. ಮಳೆಯ ಹಾಡು ಹಾಡುತ್ತ ಕುಣಿದೇ ಕುಣಿದರು !

ಮಿರಾಂಡ ಓಹಿಯೋಜ ಸರೋವರವನ್ನು ನೋಡಿ ದಳು. ಮಹಾ ಸರೋವರ ಒಣಗಿ ನೆಲವೆಲ್ಲಾ ಬಾಯಿ ಬಿಟ್ಟಿದೆ. ಮಧ್ಯ ಭಾಗದಲ್ಲಿ ಮಾತ್ರ ನೀರು. ಹಾ ! ಪವಿತ್ರ ಸರೋವರ ಹೀಗಾಯ್ತೆ ? ಎಂದು ಮುಂದಡಿ ಇಡುವಷ್ಟರಲ್ಲೇ ಯಾರೋ ಹಿಂದಿನಿಂದ ಅದುಮಿ ಹಿಡಿ ದರು ! ಯಾರೆಂದು ಹೆದರಿ ಹೈರಾಣಾಗಿ ಚೀರಬೇಕೆಂದರೆ ದನಿಯೇ ಹೊರಡಲಿಲ್ಲ. ಸರೋವರದ ಕಿನ್ನರಿಯೇ ಇರ ಬಹುದೇನೋ ಎಂದುಕೊಂಡು ಕಣ್ಣುಗಳನ್ನು ಬಿಗಿಯಾಗಿ ಮುಚ್ಚಿಕೊಂಡಳು ಮಿರಾಂಡ. ಮೈ 'ಜುಂ' ಎಂದಿತು, ಭಯದ ಮೂಟೆಯಾಗಿ. ಅತ್ತಿತ್ತ ಕೊಸರಾಡಿದರೂ ಹಿಡಿತ ಬಿಗಿತ ಸಡಿಲಗೊಳ್ಳಲಿಲ್ಲ.

"ನನ್ನ ಮುದ್ದು ಹುಡುಗಿ! ನೀನೇಕೆ ಈ ಸಾಹಸ ಕಾರ್ಯ ಕೈಕೊಂಡೆ ?"

ಹಾ! ಆ ಧ್ವನಿ ನಾರ್ಸ್ಗಾನದು! ನಾರ್ಸ್ಗಾಸಾಕಿ!

ಮಿರಾಂಡ ಕಣ್ಣು ಬಿಟ್ಟು ನೋಡಿದಳು. ಅವಳನ್ನು ತಬ್ಬಿ ಹಿಡಿದುಕೊಂಡು ನುಡಿದ ನಾರ್ಸ್ಗಾಸಾಕಿ.

"ನನ್ನ ಮುದ್ದು ಚಿನ್ನ ! ನಾವು ಈ ದೇಶವನ್ನೇ ಬಿಟ್ಟು ಹೋಗೋಣ. ನಮಗೆ ಈ ಜನಾಂಗವೂ ಬೇಡ, ಈ ದೇಶವೂ ಬೇಡ. ಬಲಿ ಬೀಳುವುದೂ ಬೇಡ !"

"ಹಾಗೆಂದರೆ ಹೇಗೆ ನಾರ್ಗ್ಘಾ ? ಜನಾಂಗದ ಉದ್ಧಾರ ನಮ್ಮ ಕೈಯಲ್ಲಿದೆ. ನಾನು ಓಹಿಯೋಜ ಸರೋವರಕ್ಕೆ ಆತ್ಮಾರ್ಪಣೆ ಮಾಡಿಕೊಂಡರೆ ಮಳೆ ಬರುತ್ತದಂತೆ ! ಮಳೆ ಬಂದರೆ ಜನ ಬದುಕುತ್ತಾರೆ. ನಾನೂ ನೀನೂ ಒಟ್ಟಿಗೇ ಸೇರಿ ಬೀಳೋಣ. ನಿನಗೆ ಹೆದರಿಕೆ ಆಗುತ್ತದೆಯೇ ?"

"ಮುದ್ದು ಹುಡುಗಿ! ಇದು ಹೆದರಿಕೆಯ ವಿಚಾರವಲ್ಲ. ಇಂದು ಮಳೆ ಬಂದೇ ಬರುತ್ತದೆ. ಅದಕ್ಕಾಗಿ ಕೆರೆಗೆ ಬೀಳ ಬೇಕಾಗಿಲ್ಲ. ನೋಡುತ್ತಿರು ! ಈಗಲೇ ಮಳೆ ಬೀಳುತ್ತೆ !"

ಸ್ವಲ್ಪ ಹೊತ್ತಿನೊಳಗಾಗಿ ಧೋ ಧೋ ಎಂದು ಸುರಿಯತೊಡಗಿತು ಮಳೆ. ಎಂತಹ ಮಳೆ ! ಊರು ಕೇರಿ ಗಳನ್ನು ತೊಳೆಯುವಂತಹ ಭೀಕರ ಮಳೆ ! ನೀರು-ನೀರು-ನೀರು ! ಎಲ್ಲೆಡೆಯೂ ಹರಿಯತೊಡಗಿತು ನೀರು !

ನಾರ್ಗ್ಘಾಸಾಕಿ ಮಿರಾಂಡಳನ್ನು ಕರೆದುಕೊಂಡು ಆ ಪವಿತ್ರ ಭೂಮಿಯಿಂದ ಹೊರಟು ಹೋದ. ಅನಂತರ ಅವರು ಯಾರ ಕಣ್ಣಿಗೂ ಬೀಳಲಿಲ್ಲ.

ಊರಿನಲ್ಲಿ ಹಾಡು ಕುಣಿತಗಳ ಜಯಧ್ವನಿ...ಕಿವಿಗಡ ಚಿಕ್ಕುವಂತೆ ಕೇಳುತ್ತಿದೆ.

ಜನ ಹರ್ಷೋದ್ಗಾರಗೈಯುತಿದ್ದಾರೆ. ಗಗನಭೇರಿ ಯಾಗಿ ಮೊಳಗುತ್ತಿದೆ ಧ್ವನಿ !

ಆ ಮಳೆಗೂ ಇತಿಮಿತಿಯಿಲ್ಲದ ಉತ್ಸಾಹ. ಭೋರ್ ಭೋರನೆ ಸುರಿದೇ ಸುರಿಯಿತು !

— o —

# ಚೋಟು—ಮೋಟು

ಚೋಟು-ಮೋಟು ಎಂದರೆ ಯಾರು ಗೊತ್ತೇ ?

ಅವರಿಬ್ಬರೂ ಗಂಡ ಹೆಂಡತಿಯರಾದ ಮೊಲಗಳು. ಬಿಳಿಯ ಬಣ್ಣ. ಕಪ್ಪು ಕಣ್ಣು. ಮೃದುವಾದ ತುಪ್ಪಳ.

ಅವು ಬಲು ಸುಂದರ ಪ್ರಾಣಿಗಳು.

ದೊಡ್ಡ ಬಂಡೆಯ ಬುಡದಲ್ಲಿದ್ದ ಒಳ್ಳೆಯ ಬಿಲದಲ್ಲಿ ಅವುಗಳ ವಾಸ.

ಅವು ಆಹಾರಕ್ಕಾಗಿ ಹೊರಹೋದಾಗಲೆಲ್ಲಾ ಆ ಬಿಲ ದೊಳಗೆ ಇಲಿಯೋ ಅಳಿಲೋ ಮತ್ತಾವುದೋ ಪ್ರಾಣಿ ಸೇರಿಕೊಂಡು ಇವರ ಪ್ರವೇಶಕ್ಕೆ ಅಡ್ಡಿಮಾಡುತ್ತಿದ್ದುವು.

ಅದರಿಂದ ಚೋಟು ಹೇಳಿತು "ನೀನು ಹೊರ ಹೋದಾಗ ನಾನು ಕಾವಲಿರುವೆ. ನಾನು ಹೊರ ಹೋದಾಗ ನೀನು ಕಾವಲಿರು. ಹೊರ ಹೋದವರು ಬರುವಾಗ ಆಹಾರ ತರಬೇಕು."

ಆ ಮಾತಿಗೆ ಮೋಟು ಒಪ್ಪಿತು.

ಚೋಟು ಮಡದಿಯನ್ನು ಕಾವಲಿಗೆ ಬಿಟ್ಟು ಆಹಾರ ಕ್ಕಾಗಿ ಹೊರಟಿತು. ಚಕ್‌ಚಕ್ಕನೆ ನೆಗೆಯುತ್ತಾ ಕೆಲವೇ ಕ್ಷಣಗಳೊಳಗಾಗಿ ಪೊಲದ ಅಂಚಿಗೆ ಹೋಯಿತು. ಸುತ್ತಲೂ ದಟ್ಟವಾಗಿ ಬೆಳೆದ ಲೆಕ್ಕಿ ಗಿಡದ ಬೇಲಿ. ಎಲ್ಲಿಯೂ

ನುಸಿಯುವಷ್ಟು ಸಂದಿಯಿಲ್ಲ. ಹಾಗೂ ಹೀಗೂ ಪ್ರಯತ್ನ ಪಟ್ಟು ಒಂದು ಕಡೆ ಮೂತಿ ತೂರಿಸಿ ನಂತರ ಮೈಯನ್ನು ತೂರಿಸಬೇಕಾದರೆ ಮೈ ಹಿಸುಕಿದಷ್ಟು ನೋವಾಯಿತು. ಕುಯ್ ಕುಯ್ ಎನ್ನುತ್ತಲೇ ಒಳನುಗ್ಗಿತು ಚೋಟು. ರೈತ ಎಷ್ಟು ಒಳ್ಳೆಯವ ! ಎಂತಹ ಮುಂಬೆಳಸು !

ಹಾ, ನೋಡುವುದೇನು ?

ಎಷ್ಟು ಚೆನ್ನಾಗಿ ಬೆಳದ ಬೆಲ್ಲಗೆಣಸು ! ಕ್ಯಾರೆಟ್ ! ಬೀನ್ಸ್ !

ಕ್ಯಾರೆಟ್ ಬೆಲ್ಲ ಗೆಣಸುಗಳು ಮುಂಬೆಳೆದು ನಿಂತುದ ರಿಂದ ಅಗೆಯುವ ಗೋಜೂ ಇಲ್ಲ. ಹೊಟ್ಟೆತುಂಬುವಷ್ಟು ಕ್ಯಾರೆಟ್, ಬೆಲ್ಲಗೆಣಸನ್ನು ತಿಂದು ಕೆಲವು ಬೀನ್ಸ್‌ಗಳನ್ನು ಕಿತ್ತುಕೊಂಡಿತು. ದೂರದಲ್ಲಿ ಎಲ್ಲೋ ಸರಸರ ಸದ್ದು ! ಒಮ್ಮೆಲೇ ಕಣ್ಣು ಕಿವಿಗಳು ಅತ್ತ ಹೊರಳಿದುವು.

ಓ ! ಹೊಲದೊಡೆಯ ಬಂದನೇನೋ...

ಒಂದೇ ಉಸಿರಿಗೆ ಓಟ ಕಿತ್ತಿತು ಚೋಟು. ಬಾಯಿ ಯಲ್ಲಿ ಕಚ್ಚಿಕೊಂಡಿದ್ದ ನಾಲ್ಕಾರು ಬೀನ್ಸ್‌ಗಳಲ್ಲಿ ಕೆಲವು ಕೆಳಗೆ ಬಿದ್ದುಹೋದುವು. ಅವನ್ನು ಹೆಕ್ಕಿಕೊಳ್ಳುವಷ್ಟು ಸಮಯ-ಸಹನೆ ಎರಡೂ ಇರಲಿಲ್ಲ. ಹೇಗೆ ಹೇಗೋ ಬೇಲಿ ಯನ್ನು ತೂರಿ ಬಿಲದೆಡೆಗೆ ಓಡಿತು.

ಹಸಿದ ಮಡದಿ ಕಾಯುತಿದ್ದಾಳೆ. ಗಂಡ ಒಳ್ಳೆಯ ಕ್ಯಾರೆಟ್ ತಂದೇ ತರುತ್ತಾನೆಂಬ ನಂಬುಗೆ-ಆಸೆ ಎರಡೂ ಮನದಲ್ಲಿ.

ಚೋಟು ಓಡುತ್ತಲೇ ಹೋಗಿ ಎರಡು ಬೀನ್ಸ್ ಗಳನ್ನು ಮುಂದಿಟ್ಟಿತು. ಆಗ ಮೋಟುವಿಗಾದ ನಿರಾಸೆ ಅಷ್ಟಿಷ್ಟಲ್ಲ.

"ಇದೇನು ಎರಡೇ ಬೀನ್ಸ್ ತಂದಿದ್ದೀ ? ನಿನ್ನ ಹೊಟ್ಟೆ ನೋಡಿದರೆ ತುಂಬಿ ಒಡೆಯುವಂತಿದೆ ! ಇದಿಷ್ಟು ಸಾಕೆ ನನಗೆ ?" ಎಂದಿತು. ಆಗಲೇ ಅದರ ಕಣ್ಣಲ್ಲಿ ನೀರು!

"ಏನು ಮಾಡಲಿ ? ಕ್ಯಾರೆಟ್ ಹೊತ್ತು ತರುವುದಕ್ಕಾಗುತ್ತದೆಯೇ ? ದಾರಿಯೂ ಇಕ್ಕಟ್ಟು."

"ನೀನು ಮಾತ್ರ ಚೆನ್ನಾಗಿ ತಿಂದು ಬಂದಿದ್ದಿ !" ಊ.....ಊ...ಎಂದು ಅತ್ತಿತು ಮೋಟು.

"ಈಗ ನೀನೇ ಹೋಗಿ ತಿನ್ನಬಹುದಲ್ಲಾ, ಅದಕ್ಕೇಕೆ ಅಳು ?"

"ಇಷ್ಟೊತ್ತಿಗಾಗಲೇ ಯಜಮಾನ ಹೊಲಕ್ಕೆ ಬಂದಿರುತ್ತಾನೆ."

"ನಿಜ...ನಿಜ. ಆಗಲೇ ಬಂದಿದ್ದ."

"ನೀನು ಯಾವತ್ತೂ ಹೀಗೆಯೇ ! ತಿಂದೂ ತಿಂದೂ ಹೇಗೆ ಮೈ ಬೆಳೆಸಿದ್ದಿ ?"

ಇಲ್ಲಿ ಕೇಳು ? ಕ್ಯಾರೆಟ್, ಬೆಲ್ಲಗೆಣಸು ತಿನ್ನುವುದಕ್ಕಾಗುತ್ತದೆಯೇ ಹೊರತು ಹೊತ್ತು ತರುವುದು ಹೇಗೆ ?"

"ಎಲ್ಲಾ ಕಳ್ಳ ನೆವ ! ಹೊಟ್ಟೆ ಬಾಕನಿಗೆ ಮಡದಿಯ ನೆನಪು ಹೇಗೆ ಬಂದೀತು ?"

"ಈಗ ಇದೆರಡು ಬೀನ್ಸಾದರೂ ತಿನ್ನು. ಆಮೇಲೆ ತರೋಣ. ಮಧ್ಯಾಹ್ನ ರೈತ ಊಟಕ್ಕೆ ಹೋಗುತ್ತಾನೆ."

ಮೋಟು ದುಃಖದುಮ್ಮಾನಗಳಿಂದ ಸೆಟೆದು ನಿಂತು ಹೇಳಿತು. "ನಿನಗೆ ದಯೆ-ಕರುಣೆ ಸ್ವಲ್ಪವೂ ಇಲ್ಲವೇ ಇಲ್ಲ. ಗಂಡು ಜಾತಿಯೇ ಇಷ್ಟು ! ಮಹಾ ಸ್ವಾರ್ಥಿಗಳು !"

ಚೋಟು ಹೆಹಹ್ಹ! ಎಂದು ನಗುತ್ತ ಪುಡದಿಯನ್ನು ಮುದ್ದಿಸುವಂತೆ ಮುಖವನ್ನು ಮುಟ್ಟಿ ಮುಟ್ಟಿ ಮೂಸಿತು.

"ಛೀ ! ಛೀ ! ಸ್ವಲ್ಪ ಸುಮ್ಮನಿರು ನನಗೆ ಹೊಟ್ಟೆ ಉರಿಯುತ್ತಿದೆ !"

"ಅದಕ್ಕೇ ಹೇಳಿದೆನಲ್ಲಾ. ಈ ಬೀನ್ಸ್ ತಿನ್ನು !"

ಆಗ ಮೋಟುವಿಗಾದ ಕೋಪ ಅಷ್ಟಿಷ್ಟಲ್ಲ. ಒಮ್ಮೆಗೇ ಚೀರಿತು.

"ಆ ನನ್ನ ಪಾಲೂ ನಿನಗೇ ಇರಲಿ ! ನೀನೇ ತಿನ್ನು!"

ಚೋಟುವಿಗೆ ಅಷ್ಟೇ ಬೇಕಾಗಿತ್ತು. ಆ ಹೆಚ್ಚಿನೆಯ ಬೀನ್ಸ್‌ಗಳಲ್ಲಿ ಒಂದನ್ನಾದರೂ ರುಚಿ ನೋಡಿರಲಿಲ್ಲ ಕೂಡ! ತರುವಾಗ ಕೆಲವಾರು ಅನ್ಯಾಯವಾಗಿ ಬಿದ್ದು ಹೋದುವು. ಈಗ ಅವಳಿಗೆ ಬೇಡವಾದರೆ ಈ ಎರಡನ್ನಾದರೂ ನಾನೇ ರುಚಿನೋಡಬಾರದೇಕೆ ಎಂಬ ಯೋಚನೆಯೂ ಬಂತು.

"ಹಾಗಾದರೆ ನಿನಗಿದು ಬೇಡವೇ ?" ಕೇಳಿತು ಚೋಟು.

ಆಸೆಗಣ್ಣುಗಳಿಂದ ನೋಡುತ್ತ ಮತ್ತೆ ಮತ್ತೆ ಕೇಳಿದ ಚೋಟುವಿಗೆ ಮೂದಲಿಸಿತು ಮೋಟು,

"ನಿನಗೀಗ ಅವನ್ನೂ ತಿನ್ನಬೇಕೆನಿಸಿದೆಯೇ ಆಸೆಗಾರ!"

"ನಿನಗೆ ಬೇಡವಾದರೆ ಅವೇಕೆ ಬಾಡಬೇಕು ?"

ಮೋಟು ಸಿಟ್ಟಿನಿಂದ ಹೇಳಿತು "ಸರಿ, ತಿನ್ನು !"

ಆಗ ಚೋಟುವಿನ ಸಂತಸವನ್ನು ಏನೆಂದು ಹೇಳೋಣ? ಮಿಾಸೆ ಕುಣಿಸುತ್ತ ಕರಂ ಕರಂ ಎಂದು ಬೀನ್ಸನ್ನು ತಿನ್ನ ತೊಡಗಿತು. ಇನ್ನೂ ಬೀಜ ಮೂಡದ ಅವು ಎಷ್ಟು ರುಚಿ?

ಮೋಟು ಗಂಡಸ ಹೊಟ್ಟೆಬಾಕತನ ಮತ್ತು ತಿನ್ನುವ ಮೋಜು ಎರಡನ್ನೂ ನೋಡಿ ಸಿಟ್ಟು ದುಃಖಿಗಳ ಗಣಿಯಾಯಿತು. ಒಂದೆರಡು ಕ್ಷಣ ತಾಳ್ಮೆಯಿಂದ ನೋಡಿದರೂ ಅನಂತರ ಸ್ಥೈರಣೆ ಮೀರಿತು.

ಹೊಟ್ಟೆ ನೋಡಿದರೆ ಆಗಲೇ ಡುಬ್ಬು! ಮತ್ತೂ ತಿನ್ನುತ್ತಲೇ ಇದೆ !

ಮೋಟು ಅದರ ಮೇಲೆ ಎಗರಿ ಬಿದ್ದು ಎರಡೂ ಕಿವಿಗಳನ್ನು ಹಿಡಿದುಕೊಂಡು ದಪದಪನೆ ಬಾರಿಸಿತು !

ಆದರೂ ಜೋಟು ತಿನ್ನುವುದನ್ನು ಬಿಡಬೇಕೆ ? ಗುಳುಂ ಗುಳುಮ್ಮನೆ ಎರಡು ಬೀನ್ಸ್‌ಗಳನ್ನೂ ತಿಂದು ಮುಗಿಸಿತು.

ಮೋಟು ಅದಕ್ಕೆ ಹೊಡೆದು ಸೇಡು ತೀರಿಸಿಕೊಂಡರೂ ಸಪ್ಪೆಮೋರೆಯಿಂದ ಮೂಲೆಯಲ್ಲಿ ಸದ್ದಿಲ್ಲದೆ ಕುಳಿತುಕೊಂಡಿತು. ಹಸಿವು, ಹೊಟ್ಟೆಯ ತುಂಬೆಲ್ಲಾ ಹಸಿವು.

— o —

ಇಂದಿನ ನಾಗರಿಕತೆಯೈಸಿರಿ
ಅನೀತಿ-ಅನ್ಯಾಯ-ಅಧರ್ಮ
ಅವಿಧೇಯತೆಗಳ ಹೇಸು
ತಳಹದಿಯ ಮೇಲೆ
ವಿಜೃಂಭಿಸುತಿರ್ಪುದು
ಅತಿ ದುರದೃಷ್ಟಕಣಾ !
ಇದಂ ವಿದ್ಯಾರ್ಥಿಗಳ್ ಅರಿತು
ಸಜ್ಜನಿಕೆಯಿಂ ಬಾಳಲಕ್ಕು !

— o —

# ಸಯ್ಯಾಜಿ

ಸೊಣ್ಣೂರಿನಲ್ಲಿ ಸಯ್ಯಾಜಿ ಎಂಬ ಶಾಲಾಬಾಲಕನಿದ್ದ. ಅವನು ಓದಿನಲ್ಲಿ ಹಿಂದೆ. ಆಟದಲ್ಲಿ ಮುಂದೆ. ಉಪಾಧ್ಯಾಯರು ಎಷ್ಟು ಹೇಳಿದರೂ ಅಸಡ್ಡೆ. ಮನೆ ಪಾಠವನ್ನು ಓದಿಕೊಳ್ಳದೆ ಶಾಲೆಗೆ ಹೋಗುತಿದ್ದ. ಇತರ ಹುಡುಗರ ಮುಂದೆ ನಗೆಗೀಡಾದರೂ ನಾಚುತ್ತಿರಲಿಲ್ಲ.

ಉಪಾಧ್ಯಾಯರು ಸಿಟ್ಟಿನಿಂದ ಕೇಳಿದರು "ಏನೋ ಸಯ್ಯಾಜಿ ! ನೀನು ಶಾಲೆಗೇಕೆ ಬರುತಿದ್ದಿ ?"

ಹುಡುಗ ಮಾತಾಡಲಿಲ್ಲ. ಸುಮ್ಮನೆ ಗೂಟದಂತೆ ಅಲ್ಲಾಡದೆ ನಿಂತ.

"ಹೇಳು ಓದುತ್ತೀಯೋ ? ಮನೆಗೆ ಹೋಗುತ್ತೀಯೋ ?"

ಆಗಲೂ ಸಯ್ಯಾಜಿ ಮಾತಾಡಲಿಲ್ಲ.

ಉಪಾಧ್ಯಾಯರಿಗೆ ಸಿಟ್ಟು ನೆತ್ತಿಗೇರಿತು. ಜೋರಿನಿಂದ ಹೇಳಿದರು.

"ನೀನು ಈಗಲೆ ಹೊರಹೋಗು !"

ಸಯ್ಯಾಜಿ ತರಗತಿಯಿಂದ ಹೊರಹೋದ. ದೂರದ ಮರದಡಿಯಲ್ಲಿ ಸ್ವಲ್ಪಹೊತ್ತು ನಿಂತಿದ್ದು ತನ್ನಲ್ಲೇ ಯೋಚಿ

ಸಿದ. ಮನೆಗೆ ಹೋದರೆ ಏಕೆ ಬಂದೆ ಎಂದು ಎಲ್ಲರೂ ಕೇಳು ತ್ತಾರೆ. ಏನು ಮಾಡಲಿ ?

ಎಷ್ಟೊತ್ತಾದರೂ ಏನು ಮಾಡುವುದಕ್ಕೂ ತೋಚ ಲಿಲ್ಲ. ಶಾಲೆಯಲ್ಲಿ ಇರುವಂತಿಲ್ಲ. ಮನೆಗೆ ಹೋಗು ವಂತಿಲ್ಲ. ಏನುಗತಿ ? ಸ್ವಲ್ಪ ಹೊತ್ತು ಯೋಚನೆಯಲ್ಲಿ ಕಳೆಯಿತು. ಕೊನೆಗೆ ಆ ಊರನ್ನೇ ಬಿಟ್ಟು ಎಲ್ಲಾದರೂ ಹೋಗೋಣ ಎನಿಸಿತು. ಹುಡುಗ ಹೆದ್ದಾರಿ ಹಿಡಿದು ನಡೆದ. ದೂರ ದೂರ ಸಾಗಿತು ಹಾದಿ. ಕಾಲು ನೋಯುವ ವರೆಗೂ ನಡೆದ. ದೂರ. ದೂರ. ಮತ್ತೂ ದೂರ.

ನೆತ್ತಿಯ ಮೇಲೆ ರಣರಣ ಬಿಸಿಲು. ಹಾದಿಯಂಚಿ ನಲ್ಲಿ ಎಲ್ಲಿಯೂ ಹೊಳೆ-ಕೆರೆ-ಕಾಲುವೆಗಳಿಲ್ಲ. ಗಂಟಲಾರು ತ್ತಿದೆ. ಹೊಟ್ಟೆಯಲ್ಲಿ ತಾಳಲಾಗದ ಹಸಿವು.

ಹಾದಿಯ ಮಗ್ಗುಲಿನ ಬಯಲಲ್ಲಿ ಒಂದು ಹೆಮ್ಮರ. ಅದರ ಸುತ್ತಲೂ ಕಲ್ಲಿನ ಕಟ್ಟೆ. ಬುಡದಲ್ಲಿ ತಣ್ಣನೆಯ ನೆರಳು. ಹಾಗೆ ಕಟ್ಟೆಯ ಮೇಲೆ ಕುಳಿತು ದಣಿವಾರಿಸಿ ಕೊಂಡ. ಹಾಗೇ ಕಣ್ಣಿಗೆ ಜೊಂಪು ಹತ್ತಿತು. ಕಟ್ಟೆಯಮೇಲೆ ಮಲಗಿ ನಿದ್ದೆ ಹೋದ.

ಸೊಗಸಾಗಿ ನಿದ್ದೆ ಹತ್ತುತ್ತಲೂ ಒಂದು ಕನಸು.

ಬಿಳಿಯಂಗಿ ತೊಟ್ಟ ದೇವತೆಯೊಬ್ಬಳು ಕಾಣಿಸಿ ಕೊಂಡು ಕೇಳಿದಳು.

"ಸಯ್ಯಾಜಿ ! ನೀನು ಓದುತ್ತಿಲ್ಲವೇಕೆ ?"

"ನನಗೆ ವಿದ್ಯೆ ಹತ್ತುತ್ತಿಲ್ಲ. ಏನು ಮಾಡಲಿ ತಾಯಿ?" ದುಃಖದಿಂದ ಬಿಕ್ಕಿದ ಹುಡುಗ.

"ಇಗೋ, ಈ ಮಣಿಯನ್ನು ನಿನ್ನ ಕತ್ತಿನಲ್ಲಿ ಧರಿಸು. ನಿನಗೆ ವಿದ್ಯೆ ಹತ್ತುತ್ತದೆ."

ದೇವತೆ ಒಂದು ದುಂಡನೆಯ ಹಸಿರು ಮಣಿಯನ್ನು ಅವನಿಗೆ ನೀಡಿದಳು.

ಹುಡುಗ ಕೈಯೊಡ್ಡಿ ತೆಗೆದುಕೊಂಡು ಅವಳಿಗೆ ವಂದಿಸಿದ. ದೇವತೆ ಆಶೀರ್ವದಿಸಿ ಅದೃಶ್ಯಳಾದಳು. ಬಾಲಕನಿಗೆ ತಟ್ಟನೆ ಎಚ್ಚರವಾಯ್ತು. ಕಣ್ಣು ಬಿಟ್ಟು ಬಿರಿ ಬಿರಿ ನೋಡಿದ. ಎಲ್ಲಿಯೂ ಆ ದೇವತೆಯ ಸುಳಿವಿಲ್ಲ. ಸುತ್ತಮುತ್ತ ನೋಡಿಯೇ ನೋಡಿದ. ಎಲ್ಲಿದ್ದಾಳೆ ದೇವತೆ ?

"ಅರೆ ! ಏನಾಶ್ಚರ್ಯ ! ಒಂದೆರಡು ಗಳಿಗೆ ಮೈದೋರಿದ್ದರೆ ಏನು ನಷ್ಟವಾಗುತಿತ್ತು. ಇನ್ನಾದರೂ ಒಂದೆರಡು ಕ್ಷಣ ಪ್ರತ್ಯಕ್ಷವಾಗು ತಾಯಿ !" ಎಂದು ಕೈಮುಗಿದು ಬೇಡಿಕೊಂಡ.

ಆದರೇನು ?

ಎಲ್ಲಿಯೂ ಅವಳ ಸುಳಿವಿಲ್ಲ. ಸುತ್ತಮುತ್ತಲೂ ಬಿರಿ ಬಿರಿ ನೋಡಿಯೇ ನೋಡಿದ. ಎಲ್ಲಿಯೂ ಬಿಳಿಯ ಛಾಯೆ ಕಾಣಿಸಲಿಲ್ಲ. ಎರಡೂ ಕೈಗಳಿಂದ ಕಣ್ಣುಗಳನ್ನು ಉಜ್ಜಿಕೊಂಡು ನೋಡಿದ. ನಿದ್ದೆಯ ಮಂಪರ ಹರಿದರೂ ದೇವತೆ ಕಾಣಲಿಲ್ಲ.

ಮಣಿಯನ್ನು ತಿರುತಿರುಗಿಸಿ ನೋಡಿದರೆ ಅದೊಂದು ಸಾಮಾನ್ಯ ಹಸಿರು ಮಣಿ. ಹಾಗೇ ಅದನ್ನು ಭದ್ರವಾಗಿ ಜೇಬಿನಲ್ಲಿಟ್ಟುಕೊಂಡು ಊರಿನ ಕಡೆ ಹೊರಟ. ಮತ್ತೆ ಅದೇ ಹೆದ್ದಾರಿಯಲ್ಲಿ ಮುನ್ನಡೆ. ಹುಡುಗ ನಡೆದೇ ನಡೆದ.

ಮನದಲ್ಲಿ ಹರ್ಷ-ಹುಮ್ಮಸ್ಸು ತುಂಬಿದ್ದುದರಿಂದ ನಡಿಗೆ ಸರಾಗ.

ದೂರದಲ್ಲಿ ತನ್ನೂರು ಕಾಣಿಸಿತು. ಎಷ್ಟೊಂದು ಮನೆಗಳು! ಕೆಲವು ಹೊಚ್ಚಹೊಸ ಮನೆಗಳು! ಇತ್ತೀಚಿನ ತರುಣರನೇಕರು ಹೊಸ ಮನೆಗಳನ್ನು ಕಟ್ಟಿದ್ದಾರೆ. ಅವರೆಲ್ಲಾ ತನ್ನ ಶಾಲೆಯಲ್ಲೇ ಓದಿ ಕಲಿತು ಬಲಿತು ಬುದ್ಧಿವಂತರಾದವರು. ನಾನೂ ಅವರಂತೆಯೇ ಇರಬೇಕಾದುದು ನ್ಯಾಯವೇ. ಅದಕ್ಕೇ ಮೇಸ್ಟರು ಹೊರ ಕಳಿಸಿದ್ದು!

ಆ ಯೋಚನೆ ಬಂದಾಗ ತನ್ನ ತಪ್ಪಿನ ಅರಿವಾಯಿತು. ಮನಸ್ಸು ಮುದುಡಿ ಕಣ್ಣುಗಳಲ್ಲಿ ನೀರಾಡಿತು. ಕಣ್ಣುಗಳನ್ನು ಒರಿಸಿಕೊಂಡು ಮನೆಯ ಮೆಟ್ಟಿಲನ್ನು ಹತ್ತಿದ.

"ಇಷ್ಟು ಹೊತ್ತು ಎಲ್ಲಿ ಹೋಗಿದ್ದೆ ಮಗೂ?" ತಾಯಿ ಕೇಳಿದಳು.

ಹುಡುಗ ನಡೆದುದನ್ನೆಲ್ಲಾ ಎರಡು ಮಾತಿನಲ್ಲಿ ತಿಳಿಸಿ ದೇವತೆ ಕೊಟ್ಟ ಹಸಿರು ಮಣಿಯನ್ನು ತೋರಿದ. ಅವಳು ಸಂತಸದಿಂದ ಅದನ್ನು ಪೋಣಿಸಿ ಅವನ ಕೊರಳಿಗೆ ಕಟ್ಟಿ "ಇನ್ನು ಮೇಲಾದರೂ ಶಾಲೆಗೆ ಹೋಗಿ ಚೆನ್ನಾಗಿ ಓದು" ಎಂದಳು.

ಅನಂತರ ಸಯ್ಯಾಜಿ ಚೆನ್ನಾಗಿ ಓದಿ ವಿದ್ಯಾವಂತನಾದ.

ದೇವತೆಯ ಆಶೀರ್ವಾದ ಫಲಿಸಿತು. ಮಣಿಯ ಪ್ರಭಾವ ಗೆಲಿಸಿತು.

— ೦ —

## ಪಟ್ಟಣದ ಸುಖ

ಅದೊಂದು ಇಲಿಗಳ ಸಭೆ. ನೂರಾರು ಸಣ್ಣಪುಟ್ಟ ದೊಡ್ಡ ಇಲಿಗಳ ಕೂಟ.

ಒಂದು ಇಲಿ ಎದ್ದು ನಿಂತು ಹೇಳಿತು "ನಾವು ಇಲ್ಲಿ ಸಭೆ ಕೂಡಿರುವುದು ಪಟ್ಟಣದ ವಿಷಯುವನ್ನು ಚರ್ಚಿಸುವು ದಕ್ಕೆ. ಈಗ ನೀವೆಲ್ಲರೂ ನಿಮ್ಮ ನಿಮ್ಮ ಅಭಿಪ್ರಾಯುವನ್ನು ತಿಳಿಸಬಹುದು."

"ನಾನು ಪಟ್ಟಣವನ್ನು ನೋಡಿರುವೆ. ಅದು ತುಂಬಾ ಸಮೃದ್ಧಿಯಾದ ತಾಣ. ನಮಗೆ ಈ ಹಳ್ಳಿಯಲ್ಲಿ ಪುಷ್ಟಿಕರ ವಾದ ಆಹಾರ ದೊರೆಯುವುದಿಲ್ಲ. ನಾವೆಲ್ಲರೂ ಪಟ್ಟಣ ಸೇರುವುದು ಒಳ್ಳೆಯದು."

"ನಾವು ಆತುರ ಪಟ್ಟುಕೊಂಡು ಹೋದರೆ ತಕ್ಷಣವೇ ನಮಗೆ ಬೇಕು ಬೇಕಾದುದೆಲ್ಲ ಅಲ್ಲಿ ಸಿಗುವುದು ಕಷ್ಟ ಎನಿ ಸುತ್ತೆ ನನಗೆ. ಅಲ್ಲಿ ಏನೆಲ್ಲಾ ಇದೆ ಎಂಬುದನ್ನು ಮೊದಲು ತಿಳಿದುಕೊಳ್ಳುವುದು ಒಳ್ಳಿತು."

"ಅಲ್ಲಿ ತಿನಿಸಿಗೇನು ಕಮ್ಮಿ? ಲಾಡು, ಚಿರೋಟಿ, ಮೈಸೂರ್ ಪಾಕ್, ಅಕ್ಕಿ, ಬೆಲ್ಲ, ಹಣ್ಣು, ಕಾಯಿ ಯಾವು ದಿಲ್ಲ? ತಿನಿಸಿಗೆ ಏನೇನೂ ಕಡಿಮೆಯಿರುವುದಿಲ್ಲ."

"ಹೋದ ಕೂಡಲೆ ವಸತಿಗೇನು ಮಾಡುವುದು? ಅಲ್ಲಿ ಎಲ್ಲಾ ಕಡೆಯೂ ಸಿಮೆಂಟ್-ಟಾರು ಹಾಕಿ ನೆಲ ಗಟ್ಟಿ

ಮಾಡಿರುತ್ತಾರೆ. ನಾವು ಬಿಲ ತೋಡುವುದು ಹೇಗೆ?"

"ಅದೊಂದು ಹೆಚ್ಚಿನ ಕಷ್ಟವಲ್ಲ ಬಿಡು. ಹೇಗಾದರೂ ಸ್ಥಳ ಹೊಂದಿಸಿಕೊಳ್ಳಬಹುದು."

"ಈ ಹಳ್ಳಿಯಲ್ಲಿ ಗಲಾಟೆ-ಗದ್ದಲ ಏನೇನೂ ಇಲ್ಲ. ನಮಗೆ ಸಾಕಷ್ಟು ತಿಂಡಿಯೂ ಸಿಗುತ್ತದೆ. ಸುಮ್ಮನೆ ಇಲ್ಲಿಂದ ಬಿಟ್ಟು ಹೋಗುವುದು ಸರಿಕಾಣುವುದಿಲ್ಲ."

"ನಮಗೆ ಹೆಚ್ಚಿನ ಸೌಕರ್ಯ ಬೇಕು ಎಂದರೆ ಪಟ್ಟಣ ಸೇರಲೇಬೇಕು."

ಹೀಗೆ ಅನೇಕ ಇಲಿಗಳು ತಮ್ಮತಮ್ಮ ಅಭಿಪ್ರಾಯ ವನ್ನು ಮುಂದಿಟ್ಟುವು. ಕೊನೆಗೂ ಪಟ್ಟಣಕ್ಕೆ ಹೋಗಲು ಹೆಚ್ಚು ಹೆಚ್ಚು ಇಲಿಗಳು ಉತ್ಸುಕವಾಗಿದ್ದುದರಿಂದ ಇಲಿಗಳ ಹಿಂಡು ಪಟ್ಟಣದ ದಾರಿ ಹಿಡಿಯಿತು. ಸ್ವಲ್ಪದೂರ ಪಯಣಿ ಸಿದಮೇಲೆ ಸಿಕ್ಕಿದ್ದು ಟಾರು ಬಳಿದ ಕರ್ರನೆ ಹೆದ್ದಾರಿ. ಅದನ್ನು ಹಿಡಿದ ಕೂಡಲೇ ಬಸ್ಸು ಕಾರುಗಳ ಚಕ್ರಕ್ಕೆ ಸಿಕ್ಕಿ ಅನೇಕ ಇಲಿಗಳು ನಜ್ಜು ಗುಜ್ಜಾದುವು.

ಆಗ ಒಂದು ಇಲಿ ಕೂಗಿ ಹೇಳಿತು. "ಅಯ್ಯೊ, ಎಂಥ ತಪ್ಪಾಯಿತು ! ನಾವು ರಸ್ತೆ ಹಿಡಿಯದೆ ಬದಿಯಲ್ಲಿ ಪಯ ಣಿಸಬೇಕಿತ್ತು. ಅನ್ಯಾಯವಾಯಿತು, ಇನ್ನು ಎಲ್ಲರೂ ಬದಿ ಗೊತ್ತಿ ! ಬದಿಯಲ್ಲಿ ಪಯಣಿಸೋಣ."

ಕೂಡಲೇ ಎಲ್ಲಾ ಇಲಿಗಳು 'ಫುಟ್‌ಪಾತ್' ಹಿಡಿ ದುವು. ಅಲ್ಲಿಯೂ ಸುಖವಿಲ್ಲ. ಕಾಲ್ನಡಿಗೆಯ ಪಯಣಿ ಗರು "ಹೊಡಿ ಹೊಡಿ ! ಎಷ್ಟೊಂದು ಇಲಿಗಳು !" ಎನ್ನುತ್ತ ದೊಣ್ಣೆ ಕಲ್ಲುಗಳಿಂದ ಹೊಡೆದು ಕೆಲವನ್ನು

ಕೊಂದರು. ಕೂಡಲೇ ಎಲ್ಲಾ ಇಲಿಗಳೂ ಹೆದರಿ ಹೈರಾಣಾಗಿ ಚ್ಹೀ ಚ್ಹೀ ಎನ್ನುತ್ತ ಚೆಲ್ಲಾಪಿಲ್ಲಿಯಾಗಿ ಓಡಿ ರಸ್ತೆಯನ್ನು ಬಿಟ್ಟು ದೂರದ ಬಯಲನ್ನು ಸೇರಿದುವು.

ಒಂದು ಇಲಿ ಹೇಳಿತು "ನಾವಿನ್ನೂ ಪಟ್ಟಣವನ್ನೇ ಸೇರಲಿಲ್ಲ. ಅಷ್ಟರೊಳಗೆ ಎಂತಹ ಅನಾಹುತ! ಇನ್ನು ಪಟ್ಟಣ ಸೇರಿದರೆ ಹೇಗಿರುತ್ತೋ?"

"ನಾವು ಈ ಬಯಲಲ್ಲೇ ನಡೆದು ಪಟ್ಟಣ ಸೇರಿದ್ದರೆ ಅನಾಹುತವಿರುತ್ತಿರಲಿಲ್ಲ. ಹೆದ್ದಾರಿ ಹಿಡಿದುದು ನಮ್ಮ ತಪ್ಪು!"

"ಮನುಷ್ಯ ಒಳ್ಳೆಯವ ಎನ್ನುತ್ತಾರೆ! ಎಲ್ಲಿದೆ ಒಳ್ಳೆತನ? ಕ್ರೂರಿ! ಮಹಾ ಕ್ರೂರಿ!"

"ಹೌದಪ್ಪಾ......ಹೌದು!"

"ನಾವು ಮೊದಲೇ ಯೋಚಿಸಿ ನಿರ್ಣಯಿಸಬೇಕಾಗಿತ್ತು."

"ನಾವು ಈ ಬಯಲಲ್ಲೇ ನಡೆದು ಪಟ್ಟಣ ಸೇರಿದರೆ ಜಿಲೇಬಿ, ಚಿರೋಟಿಗಳ ರುಚಿ ನೋಡಬಹುದು."

"ಹೋಗೋಣ! ಹೋಗೋಣ!" ಕೆಲವು ಇಲಿಗಳು ಚೀರಿದುವು.

ಅವುಗಳ ನಾಗಾಲೋಟವನ್ನು ಕಂಡು ಅಲ್ಲಲ್ಲಿ ಹುದುಗಿದ್ದ ಇಲಿಗಳು ಕೂಡಿ ಹಿರಿದಾಯಿತು ಅವುಗಳ ದಂಡು. ಹಾದಿಯಲ್ಲಿ ಸಿಕ್ಕಿದ ಗೆಡ್ಡೆಯನ್ನೋ ಹಣ್ಣುಗಳನ್ನೋ ತಿಂದು ಹಸಿವು ಹಿಂಗಿಸಿ ಮುಂದೆ ಮುಂದೆ ಓಡಿದುವು. ಕರಿಯ ಹೆದ್ದಾರಿ ಹರಿದ ದಿಕ್ಕನ್ನೇ ಹಿಡಿಯಿತು ಇಲಿಗಳ ತಂಡ. ದೂರ ನಡಿಗೆಯಾದುದರಿಂದ ಕಾಲುಗಳು ಸೋತುವು. ಮೈಕೈಯಲ್ಲೂ ನೋವು. ಹಸಿವು ಬಾಯಾರಿಕೆ ಕೂಡ. ಆದರೂ,

ಹಾದಿ ಬಹುದೂರ ಸಾಗಿದುದರಿಂದ ಹಿಂಜರಿಕೆ ಕಷ್ಟವೇ. ಪಟ್ಟಣದ ಗೀಳು ಮುನ್ನಡೆಸುತ್ತಲೇ ಇದೆ. ಕೊನೆಗಂತೂ, ಇಲಿಗಳು ಪಟ್ಟಣವನ್ನು ಸೇರಿದುವು.

ಅಹಃ ! ಎಂತಹ ನಗರ ! ಎಷ್ಟು ಚೆನ್ನಾದ ಅಂಗಡಿಗಳು ! ಮನೆಗಳು !

ಗ್ರಾಮದಲ್ಲಿ ಎಂದೂ ನೋಡಿರದ ಮಹಾ ಅದ್ಭುತಗಳು ಪಟ್ಟಣದಲ್ಲಿ! ಜಿಲೇಬಿ-ಚಿರೋಟಿಗಳು ಮಾತ್ರವೇನು? ಎಷ್ಟು ನೋಡಿದರೂ ಮುಗಿಯದಂತಹ ತಿಂಡಿ ತಿನಿಸುಗಳಗಳ ಸಾಲು. ಈ ದುಷ್ಟ ಮನುಷ್ಯರು ಏನೆಲ್ಲಾ ಮಾಡುತ್ತಾರೆ ? ಎಷ್ಟು ಶಕ್ತಿ ಇವರಿಗೆ ? ಆದರೆ, ಪ್ರಾಣಿದಯೆ ಸ್ವಲ್ಪವೂ ಇಲ್ಲವಲ್ಲಾ ? ನಿಜಕ್ಕೂ ಹೇಳುವುದಾದರೆ ನಮ್ಮಂತಹ ಅಬಲರಿಗೆ ಇವರೇ ಸರ್ವಾಧಾರವಾಗಬೇಕಿತ್ತು. ಅದಕ್ಕೆ ಬದಲಾಗಿ ಕೊಲ್ಲುವುದೇ ಆಗಿದೆ. ಇವರು ಜನರೇ ಅಲ್ಲ, ಜವ-ಜವ !

“ಹೌದು ! ಹೌದು ! ನೀನು ಅಂದದ್ದೇ ಸರಿ ಜವ-ಜವನಿಗಿಂತಲೂ ಹೀನ !”

ಇಲಿಗಳು ಹಾಗೆಂದು ಒಂದಕ್ಕೊಂದು ಹೇಳಿಕೊಂಡುವು.

ಹಗಲು ಉರುಳಿ ರಾತ್ರಿ ಅಡರಿತು.

ತಟ್ಟನೆ ಎಲ್ಲೆಡೆಯೂ ವಿದ್ಯುಚ್ಛಕ್ತಿ ದೀಪಗಳು ಭುಗ್ಗನೆ ಹೊತ್ತಿ ಜಗಜಗಸಿದುವು. ಕಣ್ಣು ಕುಕ್ಕುವಷ್ಟು ಮಿಂಚಿನ ಬೆಳಕು. ಎಲ್ಲಿಯೂ ಬಹಿರಂಗವಾಗಿ ಓಡಾಡುವಂತಿಲ್ಲ. ಯಾರಾದರೂ ಕಂಡರೆ ಗತಿ ಮುಗಿಸಿಬಿಡುತ್ತಾರೆ. ಭಯ-

ಭಯ ಎಲ್ಲಿ ತಲೆ ಹಾಕಲೂ ಭಯ. ತಿಂಡಿಯ ವಾಸನೆ ಮಾತ್ರ ಎಲ್ಲಾಕಡೆಯೂ ಕೈಬೀಸಿ ಕರೆಯುತ್ತದೆ.

ಇಲಿಗಳ ತಂಡ ಜನಗಳ ಕಣ್ಣಿಗೆ ಬೀಳದಷ್ಟು ಎಚ್ಚರ ವಹಿಸಿ ಸೀದಾ ಹೋಗಿದ್ದು ತಿಂಡಿಯ ಮಳಿಗೆಗೆ. ಒಂದು ಕನ್ನಡಿಯ ಬೀರುವಿನಲ್ಲಿ ತಿಂಡಿಗಳನ್ನು ಬಗೆ ಬಗೆಯ ರೀತಿ ಯಲ್ಲಿ ಪೇರಿಸಿದ್ದಾರೆ. ಕೆಳಗಡೆಯೂ ಅಷ್ಟಿಷ್ಟು ಚೆಲ್ಲಿದೆ. ಅದನ್ನು ನೋಡುತ್ತಲೂ ಇಲಿಗಳು ಬೀರುವಿನ ಕೆಳಗೆ ಜಮಾಯಿಸಿದುವು. ಇಂದಿಗೇಕೆ, ನಾಳೆಗೂ ಆಗುವಷ್ಟು ಔತಣ! ಮೇಲೆ ವ್ಯಾಪಾರ ನಡೆಯುತ್ತಲೇ ಇದೆ. ಜನ ಮುತ್ತುತಿದ್ದಾರೆ. ಕಾಸು ಝಣಝಣಿರೆನ್ನುತ್ತಿದೆ.

ಓ ಎಂತಹ ಘಮ ಘಮ ವಾಸನೆ !

ಇಲಿಗಳು ಕೆಳಗಡೆ ತಿಂಡಿ ಮೆಲ್ಲುತ್ತಲೇ ಇವೆ ! ಅದು ಜಿಲೇಬಿಯೋ ಚಿರೋಟಿಯೋ ಯಾರಿಗೆ ಗೊತ್ತು ! ಅಂತೂ ಬಲೂ ರುಚಿಕರವಾದ ಹಬ್ಬದೂಟ !

ಆ ವೇಳೆಗೆ ಯಾರು, ಎಲ್ಲಿ ಕಣ್ಣಿಟ್ಟಿದ್ದರೋ ಬೀರು ವಿನಡಿಯ ಹಲಗೆಯನ್ನು ಮೆಲ್ಲಗೆ ಅಮುಕಿದರು! ಹಾ, ಚೀಂ ಚೀಂ ಎಂದು ಚೀರುತ್ತ ಬಹಳ ಇಲಿಗಳು ಜಜ್ಜಿ ಹೋದುವು! ಉಳಿದ ಕೆಲವನ್ನು ಓಡಿಸಾಡಿ ಬೂಟು ಕಾಲಿಂದ ತುಳಿದು ಸಾಯಿಸಿದರು ಕೂಡ.

ದುಷ್ಟ ಜನ ! ಕ್ರೂರಿಗಳು ! ನಾವು ಕಾಡಿ ಬೇಡಲಿಲ್ಲ. ಚೆಲ್ಲಾಡಿ ಕೆಳಗೆ ಬಿದ್ದುದನ್ನು ತಿಂದೆವು ಅಷ್ಟೆ ! ಅದಕ್ಕೇ

ಇಷ್ಟೊಂದು ರೋಷ! ದ್ವೇಷ! ಎಂದು ಉಳಿದ ಕೆಲವಾರು ಇಲಿಗಳು ಅಳುತ್ತ-ಚೀರುತ್ತ ಈ ಪಟ್ಟಣವೂ ಸಾಕು: ಈ ತಿಂಡಿ ತೀರ್ಥಗಳೂ ಸಾಕು; ಎನ್ನುತ್ತ ತಮ್ಮ ಹಳ್ಳಿಯ ಹಾದಿಯನ್ನು ಹಿಡಿದು ದೌಡಾಯಿಸಿ ಓಡತೊಡಗಿದುವು.

— o —

ಮಗುವೆ, ಕಾಲವೆಂಬುದು ದ್ರವ್ಯ!
ಕಾಲವು ಸೋಲದು ಎಂದೆಂದೂ
ಕಾಲವ ಸರಿಗಟ್ಟಲು ನೀನು
ಓಡುವುದರಿಂದಲ್ಲದೆ
ಸೋಲಿಸಲಾರೆ ಕಾಲದ್ರವ್ಯ!
ನೀನು ಹಿಂದಿರುಗಿ ಕಳೆದ
ಕಾಲವ ನೋಡಿ ತಿಳಿಯೆ
ಏನು ಮಾಡಿದೆ-ಏನಿಲ್ಲ
ಎಂಬುದರ ಪರಿಶೀಲನೆಯಿಂದೆ
ತಿಳಿವುದು ನಿನ್ನ ಸೋಲು–ಗೆಲವು!

— o —

# ರಾಣಿ ಹಂಸ

ಚೀಣಾ ದೇಶದಲ್ಲಿ ಒಂದು ಹಳ್ಳಿ. ಅದರ ಹೆಸರು ಚಿನ್‌ಕಾಂಗ್. ಅಲ್ಲೊಬ್ಬ ತುಂಬಾ ಒಳ್ಳೆಯ ಸ್ವಭಾವದ ಯುವಕನಿದ್ದ. ಅವನ ಹೆಸರು ಷು-ವಾಂಗ್. ಅವನಿಗೆ ತಾಯಿಯಲ್ಲಿ ಬಹಳ ಪ್ರೀತಿ. ಅವಳಿಗೆ ಬೇಕಾದ ಎಲ್ಲಾ ಸಹಾಯವನ್ನು ಕೈತುಂಬ ಮಾಡುತ್ತಿದ್ದ. ಆವಳಿಗೂ ಮಗ ನೆಂದರೆ ಅಷ್ಟೇ ಪ್ರೀತಿ. ದಿನವೂ "ನಿನ್ನನ್ನು ದೇವರು ಕಾಪಾಡಲಿ ಮಗನೇ !" ಎಂದು ಹರಸುತ್ತಿದ್ದಳು. ಅವರು ಬಹಳ ಬಡವರು. ತಂದೆ ಕೆಲಸಗಾರನಲ್ಲ. ಮಗನ ಕೂಲಿಯ ಕಾಸಿನಿಂದ ಮೂವರ ಹೊಟ್ಟೆ ತುಂಬಬೇಕಿತ್ತು.

"ಮಗನೇ ! ನೀನು ಒಮ್ಮೆ ನಮ್ಮ ಬೆಟ್ಟದ ದೇವತೆ ಲೀ-ವಿಯಾಂಗ್‌ಳನ್ನು ಪೂಜಿಸು. ಆಕೆ ದಯಾವಂತೆ. ಅವಳು ನಿನ್ನನ್ನು ಖಂಡಿತ ಹರಸುತ್ತಾಳೆ," ಎಂದಳು ತಾಯಿ.

ಷು-ವಾಂಗ್ ಒಂದೆರಡು ಗಳಿಗೆ ಯೋಚಿಸಿ ಹೇಳಿದ "ಪೇಟೆಯಲ್ಲಿ ಲೀ-ವಿಯಾಂಗ್ ದೇವತೆಯ ಚಿತ್ರಗಳನ್ನು ಮಾರುತ್ತಾರೆ. ಕೊಂಡು ತಂದು ಪೂಜಿಸುವೆ. ನಾನು ಬೆಟ್ಟಕ್ಕೆ ನಡೆದು ಹೋಗುವುದೆಂದರೆ ಒಂದು ದಿನದ ಕೂಲಿ ಹೋಗು ತ್ತದೆ. ಅಲ್ಲದೆ, ಊಟ ನಿದ್ದೆಗೂ ತೊಂದರೆ. ಇದೆಲ್ಲಾ ಆಗದ ಮಾತು."

"ನಿನ್ನ ಕೂಲಿ ಕೆಲಸಕ್ಕೆ ಎರಡು ದಿನ ತಂದೆಯನ್ನು ಹಚ್ಚಿದರೆ ಆದೀತು ಕೇಳಿ ನೋಡು. ಅವನು ಒಪ್ಪಿದರೆ ನಿನಗೆ ಅನುಕೂಲ."

"ಅವನಿಗೆ ಕೆಲಸ ಎಂದರೆ ಒಗ್ಗುವುದಿಲ್ಲ. ಸೋಮಾರಿ ತನ ಒಗ್ಗಿಹೋಗಿದೆ. ಕೇಳಿದರೆ ಸಿಟ್ಟಾಗುತ್ತಾನೆ."

ಅವನು ಮದ್ಯ ಮಾದಕ ವಸ್ತುಗಳಿಗೆ ಮಾರು ಹೋದವ. ಮಗನ ಕೂಲಿಯಲ್ಲಿ ಪಾಲು ಕೇಳುತ್ತಿದ್ದ. ಅವರಿವರಲ್ಲಿ ತನ್ನ ದುಶ್ಚಟಗಳಿಗಾಗುವಷ್ಟು ಕೈಕೆಲಸ ಮಾಡಿ ಕುಡಿದು ಬಿದ್ದುಕೊಳ್ಳುತ್ತಿದ್ದ. ಅವನ ಕುಡಿತದ ದೆಸೆಯಿಂದ ಮನೆಯಲ್ಲಿದ್ದ ಅಷ್ಟಿಷ್ಟು ಪಾತ್ರೆ ಪಗಡಿಗಳೂ ಮದ್ಯದ ಅಂಗಡಿಯನ್ನು ಸೇರಿದ್ದುವು. ಅದನ್ನೆಲ್ಲಾ ಒಂದು ಗಳಿಗೆ ಯೋಚಿಸಿ ಮಗನ ಮಾತಿಗೆ ಸುಮ್ಮನಾದಳು ತಾಯಿ. ಮುಖ ಬಿಂಬ ಖಿನ್ನವಾಯಿತು.

ವೃದ್ಧ ತಾಯಿ ಹಿಂದೆಲ್ಲಾ ಕೈತುಂಬ ಕೆಲಸಮಾಡಿ ದವಳೇ. ಈಚಿಗೆ ಆರೋಗ್ಯ ಕೆಟ್ಟು ಶಕ್ತಿಹೀನಳಾದುದರಿಂದ ಮಗನ ಭವಿಷ್ಯದಲ್ಲಿ ತುಂಬಾ ಕಳಕಳಿ-ಕಾಳಜಿ.

ಗಂಡ ಮನೆಗೆ ಬರುತ್ತಲೂ ಹೇಳಲಾರದೆ ಹೇಳಿದಳು,

"ನೋಡು, ಲೀ-ವಿಯಾಂಗ್ ದೇವತೆಯನ್ನು ಪೂಜಿಸಲು ಪು-ವಾಂಗ್ ಬೆಟ್ಟಕ್ಕೆ ಹೋಗಿ ಬರುವುದುಂಟು. ನೀನು ಅವನ ಪರವಾಗಿ ಒಂದೆರಡು ದಿನ ಕೆಲಸಮಾಡಿದರೆ ಬಹಳಷ್ಟು ಉಪಕಾರವಾದೀತು."

ಕುಡಿದ ಗಂಡ ಆ ಮಾತು ಕೇಳಿ ಕೆರಳಿ ಕೆಂಡವಾದ.

"ಮಡದಿ ಕೆಲಸ ಹೇಳುವುದೆಂದರೇನು? ನಿನಗೆಷ್ಟು ದಿಮಾಕು? ಗರ್ವ?" ಎಂದು ಸಿಟ್ಟಿನಿಂದ ಅರಚಿದವನೇ

ಅವಳನ್ನು ಝಾಡಿಸಿ ನೂಕಿಬಿಟ್ಟ! ತಲೆ ದಿಢೀರನೆ ಬಾಗಿಲಿಗೆ ಬಡಿದು ನೆತ್ತರು ಸುರಿಯಿತು. ಲಬೋಲಬೋ ಎಂದು ಬಾಯಿ ಬಡಿದುಕೊಂಡ ಅವಳು ಅಲ್ಲೇ ಬಿದ್ದುಕೊಂಡಳು ಏಳಲಾಗಲಿಲ್ಲ.

ಅಂದು ಕೂಲಿ ಪೂರೈಸಿ ಷು-ವಾಂಗ್ ಮನೆಗೆ ಹಿಂದಿರುಗಿದಾಗ ತಾಯಿ ಅಗಾಧವಾದ ನೋವಿನಿಂದ ಮಲಗಿದ್ದಳು. ಅಪ್ಪ ಮದ್ಯದಮಲಿನಲ್ಲಿ ಮೈಮರೆತು ಮೂಲೆಯಲ್ಲಿ ಒರಗಿದ್ದ. ಷು-ವಾಂಗ್ ಒಂದು ಗಳಿಗೆ ಇಬ್ಬರನ್ನೂ ನಿಂತು ನೋಡಿದ. ಕಣ್ಣುಗಳಲ್ಲಿ ನೀರಾಡಿತು. ತಾಯಿಯನ್ನು ವೈದ್ಯರಿಗೆ ತೋರಿಸುವ ಸಲುವಾಗಿ ಕರೆದೊಯ್ಯುವ ಯೋಚನೆಯಲ್ಲಿರುವಾಗ ಅವಳೇ ಅಂದಳು "ಮಗನೇ! ನನ್ನ ನೋವು ಅಗಾಧ. ನಾನು ಬದುಕುವ ಸಂಭವವಿಲ್ಲ. ನೀನು ವೈದ್ಯರಿಗಾಗಿ ಕಾಸು ಖರ್ಚು ಮಾಡುವ ಅಗತ್ಯವಿಲ್ಲ. ನನ್ನ ಬಳಿ ಒಂದಿಷ್ಟು ಕುಳಿತುಕೊ. ನಿನ್ನ ತಲೆಯನ್ನು ನೇವರಿಸುವೆ."

"ಅಮ್ಮಾ! ನೀನು ಬಿಟ್ಟು ಹೋದರೆ ಏನು ಗತಿ? ನಾನು ಈಗಲೇ ವೈದ್ಯರನ್ನು ಕರೆತರುವೆ." ಎಂದವನೆ ಒಂದು ಕ್ಷಣವೂ ನಿಲ್ಲದೆ ವೈದ್ಯರ ಬಳಿಗೆ ಓಡಿದ. ಒಂದು ಮೈಲಿ ದೂರದಲ್ಲಿ ವೈದ್ಯನ ಮನೆ. ಮನೆಯ ವರಾಂಡದಲ್ಲಿ ಚುಟ್ಟಿ ಸೇದುತ್ತ ಆರಾಮವಾಗಿ ಕುಳಿತಿದ್ದ ವೈದ್ಯ ಮೊದಲು ಕೇಳಿದ್ದು "ನಿನ್ನಲ್ಲಿ ಹಣ ಇದೆಯೇ ?" ಎಂದು.

"ಇದೆ, ವೈದ್ಯರೇ! ಮೊದಲು ನನ್ನ ತಾಯಿಯನ್ನು ಉಳಿಸಿ."

ಕಂಬನಿಗರೆಯುತ್ತ ನುಡಿದ ಪು-ವಾಂಗ್.

ವೈದ್ಯ ಸ್ವಲ್ಪಹೊತ್ತು ಅನುಮಾನಿಸಿ, ಅನಂತರ ಹೊರಟ. ಇಬ್ಬರೂ ಮನೆ ಮುಟ್ಟಿದಾಗ ಅಪ್ಪ ಬಿದ್ದಲ್ಲಿಯೇ ವಾಂತಿ ಮಾಡಿಕೊಂಡಿದ್ದ. ಮದ್ಯದ ದುರ್ವಾಸನೆ ಮನೆಯನ್ನು ಆವರಿಸಿತ್ತು. ತಾಯಿ ತೆರೆದ ಬಾಯಿ ಮುಚ್ಚದೆಯೇ ಪ್ರಾಣ ಬಿಟ್ಟಿದ್ದಳು. "ಸ್ವಲ್ಪಹೊತ್ತು ನನ್ನ ಬಳಿ ಕುಳಿತುಕೊ..." ಎಂದ ಅವಳ ಮಾತನ್ನು ನಿರ್ಲಕ್ಷಿಸಿ ವೈದ್ಯರ ಬಳಿಗೆ ಓಡಿದುದನ್ನು ಜ್ಞಾಪಿಸಿಕೊಂಡು ಗಳಗಳ ಅಳತೊಡಗಿದ ಪು-ವಾಂಗ್. ಆದರೆ, ವೈದ್ಯನಿಗೆ ಹಣದ ಮೇಲೆಯೇ ಕಣ್ಣು.

"ಎಲ್ಲಯ್ಯಾ ನನ್ನ ಹಣ ?" ಎಂದು ಕೇಳಿಯೇ ಬಿಟ್ಟ.

"ನೀವು ಏನು ಮಾಡಲಿಲ್ಲವಲ್ಲಾ ?"

"ಅಲ್ಲಿಂದ ಇಲ್ಲಿಯವರೆಗೆ ಬರಲಿಲ್ಲವೇ ?" ಗಡುಸು ಧ್ವನಿಯಿಂದ ಕೇಳಿದ ವೈದ್ಯ.

ಪು-ವಾಂಗ್ ಅತೀ ದೈನ್ಯತೆಯಿಂದ ಬೇಡಿದ "ಸ್ವಾಮಿ, ನಾನು ಬಡವ. ನನ್ನ ಕೂಲಿಯ ಹಣ ಇಂದಿನ ಖರ್ಚಿಗೆ ಬೇಕಾದೀತು, ದಯವಿಟ್ಟು ಕ್ಷಮಿಸಿರಿ."

ಆದರೆ, ವೈದ್ಯ ಕೇಳಬೇಕೆ ? ಪಟ್ಟು ಹಿಡಿದು ಅವನ ಕೈಯಿಂದ ಹಣವನ್ನು ಕಸಿದುಕೊಂಡು ನಡೆದೇ ಬಿಟ್ಟ. ಇತ್ತ ಪು-ವಾಂಗ್ ಸಹಿಸಲಾರದ ದುಃಖದಿಂದ ತಾಯಿಯ ಬಳಿಯಲ್ಲಿ ಸ್ವಲ್ಪ ಹೊತ್ತು ಅತ್ತು ದಿಕ್ಕೆಟ್ಟವನಂತೆ ಅಲ್ಲಿಂದ ಹೊರಟುಬಿಟ್ಟ. ದೂರದಲ್ಲಿ ಒಂದು ವಿಶಾಲವಾದ ಕೆರೆ. ಕೆರೆಯಂಚಿನಲ್ಲಿ ಒಂದು ಹೆಬ್ಬಂಡೆ. ಅದರ ಬುಡದಲ್ಲಿ ಹಾಸುಗಲ್ಲು. ಹುಡುಗ ಹಾಸುಗಲ್ಲಿನ ಮೇಲೆ ಕುಳಿತು

ಹೆಬ್ಬಂಡೆಗೆ ವೈವಾಲಿದ. ಕಣ್ಣುಗಳಲ್ಲಿ ನೀರು ಹನಿಹನಿಯಾಗಿ ಹರಿಯುತಿತ್ತು. ಅವನು ಮುಸಿ ಮುಸಿ ಅಳುತ್ತಲೇ ಇದ್ದ. ಆ ಪುಷ್ಕರಣಿಯುಲ್ಲಿ ವಾಸವಾಗಿದ್ದ ರಾಣಿ ಹಂಸ ಹುಡುಗನ ದುಃಖವನ್ನು ನೋಡಿ ಕನಿಕರದಿಂದ ಕೇಳಿತು "ಷು-ವಾಂಗ್ ! ಏಕೆ ಅಳುತಿದ್ದೀಯೆ ?"

ಹುಡುಗ ತನ್ನ ಕಷ್ಟವನ್ನು ಹೇಳಿಕೊಂಡ. ಆಗ ಹಂಸ ಹೇಳಿತು "ಅಯ್ಯಾ, ಚಿಂತಿಸಬೇಡ ಆದುದು ಆಗಿಹೋಯಿತು. ಇನ್ನು ದುಃಖಿಸಿ ಫಲವಿಲ್ಲ. ನಾನು ನಿನ್ನ ಸಂಗಾತಿಯಾಗಿರುವೆ. ಇನ್ನು ಮುಂದೆ ನೀನು ಸುಖವಾಗಿರುವಂತೆ ಮಾಡುವುದು ನನ್ನ ಕರ್ತವ್ಯ."

ಹುಡುಗ ಹಂಸವನ್ನು ತೊಡೆಯುಮೇಲೆ ತೆಗೆದುಕೊಂಡು ಹೇಳಿದ "ನನ್ನ ಮನೆಯೆಂದರೆ ಒಂದು ಗುಡಿಸಲು. ಅದರಲ್ಲಿರುವುದು ನಾನು ಮತ್ತು ನನ್ನ ಕುಡುಕ ಅಪ್ಪ ಮಾತ್ರ. ಅಲ್ಲಿ ನಿನಗೊಂದು ಕೊಳವಿಲ್ಲ. ಹೇಗೆ ಇರಬಲ್ಲೆ?"

"ನೀನು ನನ್ನ ಕತ್ತನ್ನು ತಿರುಚಿ ಸಾಯಿಸಿ ಬಿಡು. ಅನಂತರ ನಾನು ನಿನ್ನವಳಾಗುವೆ !"

"ಅಯ್ಯೋ, ಎಂತಹ ಪಾಪ ಕೃತ್ಯ ? ನಾನು ಖಂಡಿತ ನಿನ್ನ ಸಾಯಿಸಲಾರೆ !"

"ಹಾಗೆನ್ನಬೇಡ. ನಾನೊಬ್ಬ ಶಾಪಗ್ರಸ್ತ ಹೆಣ್ಣು. ನಾನು ನಿನ್ನ ಹೆಣ್ಣಾಗಬೇಕಾದರೆ ನನ್ನ ಹಂಸರೂಪು ಹೋಗಲೇಬೇಕು !"

ಯುವಕ ದಿಗ್ಭ್ರಾಂತನಾದ. ಮುದ್ದು ಹಂಸೆಯುನ್ನು ನೋಡಿದರೆ ಕೊಲ್ಲಲು ಮನಸ್ಸು ಬರುವುದಿಲ್ಲ. ದುಃಖದೊಂದಿಗೆ ಸಂಕಟವೂ ಸೇರಿಕೊಂಡಿತು.

ರಾಣಿ ಹಂಸ ಎರಡೂ ರೆಕ್ಕೆಗಳನ್ನೆತ್ತಿ ಅವನ ಮುಖ ವನ್ನು ನೇವರಿಸಿ ಮುದ್ದುಗೈದು ಕ್ರೇಂಕರಿಸಿತು. ಘು-ವಾಂಗ್ ಸ್ವಲ್ಪ ನಿಧಾನಿಸಿದ. ಹಂಸ ಮತ್ತೆ ಒತ್ತಾಯಿಸಿ ಎರಡೂ ರೆಕ್ಕೆ ಕೈಗಳಿಂದ ಅವನ ಮುಖವನ್ನು ಮುದ್ದಿಟ್ಟುಕೊಂಡಿತು. ಘು-ವಾಂಗ್ ಸ್ವಲ್ಪ ಧೈರ್ಯಮಾಡಿ ಅದರ ಕೊರಳನ್ನು ತಿರುಚಿ ಮುರಿದು ಬಿಟ್ಟ. ಆ ಕೂಡಲೆ ಅದು ಸುಂದರ ಹುಡುಗಿಯಾಗಿ ಮಾರ್ಪಟ್ಟಿತು !

"ಏಳು ! ಕತ್ತಲಾಗುತಿದೆ ನಿನ್ನ ಮನೆಗೆ ಹೋಗೋಣ. ನಿನ್ನ ತಾಯಿಗೆ ಮಣ್ಣು ಕೊಡುವುದಿದೆ,"

"ಆಗಲಿ, ರಾಣಿ !" ಎನ್ನುತ್ತ ಅವನು ಎದ್ದು ನಿಂತ.

ಇಬ್ಬರೂ ಕೈಕೈ ಹಿಡಿದುಕೊಂಡು ಹೊರಟರು.

"ಇಂದಿನ ಕೂಲಿ ಹಣವನ್ನು ವೈದ್ಯ ಕಿತ್ತುಕೊಂಡ. ನಾಳೆ ಕೂಲಿ ಮುಗಿಸುವವರೆಗೆ ಮನೆಯಲ್ಲಿ ತಿನ್ನಲು ಏನೂ ಇರುವುದಿಲ್ಲ." ದುಃಖದಿಂದ ಹೇಳಿದ ಯುವಕ.

"ನೀನು ಯೋಚಿಸಬೇಡ" ಎಂದಳು ಅವಳು.

ಆಕಾಶದಲ್ಲಿ ಚಂದ್ರ ಬೆಳಗುತಿದ್ದ. ಬೆಳದಿಂಗಳು ಭೂಮಿಯಮೇಲೆ ಬೆಳ್ಳಗೆ ಹರಡಿತ್ತು. ಇಬ್ಬರೂ ಮನೆ ಮುಟ್ಟಿದಾಗ ನೆರೆಹೊರೆಯವರು ಸೇರಿ ಅಂತ್ಯಸಂಸ್ಕಾರಕ್ಕೆ ಅಣಿ ಮಾಡಿಕೊಂಡಿದ್ದರು. ಅವರೊಂದಿಗೆ ಹೋಗಿ ತಾಯಿಗೆ ಮಣ್ಣುಕೊಟ್ಟು ಮನೆಗೆ ಬಂದರು. ಮಡಕೆಯಲ್ಲಿ ಬೆಳಗಿನ ಗಂಜಿ ಮಾತ್ರ ಇತ್ತು. ಅದನ್ನೇ ತಟ್ಟೆಗೆ ಸುರಿದು ಮಾವ ನಿಗೆ ಕೊಡುತ್ತ ರಾಣಿ ಹಂಸ ಹೇಳಿದಳು "ನಾನು ನಿನ್ನ ಮಗನ ಬಾಳ ಸಂಗಾತಿಯಾಗಿ ಬಾಳಲು ಬಂದಿರುವೆ. ಇನ್ನು ಮುಂದೆ ನಿಮ್ಮ ಅಗತ್ಯಗಳನ್ನು ನಾನೇ ಪೂರೈಸುವೆ."

ಮುದುಕ ಮಾತಾಡದೆ ದುರುದುರು ನೋಡಿದ.

"ನಾನು ದಿನವೂ ರಾತ್ರಿ ಕೊಠಡಿಯ ಕದ ಮುಚ್ಚಿಕೊಂಡು ಕೆಲಸ ಮಾಡುವೆ. ಆಗ ನೀವಾರೂ ಒಳ ಬಂದು ನೋಡಬಾರದು."

ಷು-ವಾಂಗ್ ಅವಳನ್ನು ಮಿಕಿಮಿಕಿ ನೋಡಿದ. ಅವಳು "ಅದು ಹಾಗೆಯೇ ಸುಮ್ಮನಿರು. ಒಂದು ವೇಳೆ ನೀವು ವ್ರತಭಂಗ ಮಾಡಿದರೆ ನಾನು ಈ ಮನೆಯಲ್ಲಿರಲಾರೆ." ಎಂದು 'ಗುಡ್ ನೈಟ್' ಹೇಳಿ ಕೊಠಡಿಯ ಕದ ಹಾಕಿಕೊಂಡಳು. ಷು-ವಾಂಗ್ ಹಗಲೆಲ್ಲ ದುಡಿದಿದ್ದುದರಿಂದ ಆಯಾಸಗೊಂಡು ನಿದ್ದೆ ಹೋದ. ಮದ್ಯದಮಲಿನ ಅಪ್ಪನೂ ನಿದ್ದೆ ಮಾಡಿದ.

ರಾಣಿ ಹಂಸ ರಾತ್ರಿಯಲ್ಲಿ ರೇಶಿಮೆಯ ಬಟ್ಟೆಯನ್ನು ನೇಯ್ದು ಮಡಿಸಿಟ್ಟಳು. ಲಕಲಕ ಹೊಳೆಯುವ ರೇಶಿಮೆಯ ಬಟ್ಟೆ ! ತಂದೆ ಮಗ ಬೆಳಗೆದ್ದು ನೋಡುತ್ತಾರೆ ಎಂತಹ ಆಶ್ಚರ್ಯ ! ಹುಡುಗಿ ನಿರಾಳವಾಗಿ ಅದನ್ನು ಷು-ವಾಂಗನ ಕೈಗಿಟ್ಟು "ಪೇಟೆಯಲ್ಲಿ ಮಾರಿಕೊಂಡು ಬಾ" ಎಂದಳು. ಅವನು ಆ ಕ್ಷಣವೇ ಹೊರಟ. ಪೇಟೆಯಲ್ಲಿ ಯಾರೂ ಅದಕ್ಕೆ ಬೆಲೆ ಕಟ್ಟದಾದರು. ಎಲ್ಲರಿಗೂ ಆಶ್ಚರ್ಯವೇ ಆಶ್ಚರ್ಯ. ಅಂತಹ ಬಟ್ಟೆಯನ್ನು ಯಾರೂ ಕಂಡಿರಲೇ ಇಲ್ಲ. ಎಲ್ಲರೂ ತಲೆಕೆಡಿಸಿಕೊಂಡು ಲಕ್ಷ ಯೆನ್‌ಗಳಿಗೆ ಕೊಂಡು "ಇನ್ನೂ ಎಷ್ಟಿದ್ದರೂ ತಂದುಕೊಡು" ಎಂದರು.

ಷು-ವಾಂಗ್ ಆ ಅಪಾರವಾದ ದ್ರವ್ಯದಿಂದ ಮನೆಗೆ ಬೇಕು ಬೇಕಾದ ಪದಾರ್ಥಗಳನ್ನು ಕೊಂಡು ತಂದ. ಅಡಿಗೆ

ಮಾಡಿ ಹೊಟ್ಟೆತುಂಬ ಉಂಡು ಮಲಗಿದರು. ರಾಣಿ ಹಂಸ ದಿನವೂ ರಾತ್ರಿ ಬಟ್ಟೆ ನೇಯುತಿದ್ದಳು. ಒಳ್ಳೆಯ ವ್ಯಾಪಾರದಿಂದ ಮನೆ ಸಂಮೃದ್ಧವಾಯಿತು. ಮುದುಕನಿಗೆ ಆಶ್ಚರ್ಯ. ಮಗ್ಗವಾಗಲೀ ಅರಳೆಯಾಗಲೀ ಇಲ್ಲದೆ ಇವಳು ಬಟ್ಟೆ ನೇಯುವುದಾದರೂ ಹೇಗೆ? ಇವಳು ಮಾಂತ್ರಿಕಳೋ, ರಾಕ್ಷಸಿಯೋ ಆಗಿದ್ದಲ್ಲಿ ನಮಗೆ ಒಂದಲ್ಲ ಒಂದುದಿನ ಅಪಾಯವಿದೆ. ರಾತ್ರಿ ಬಾಗಿಲು ತೆರೆದು ನೋಡಿಯೇ ತೀರಬೇಕು ಎಂದು ಮಗನಿಗೆ ಒತ್ತಾಯಿಸಿದ. ಯುವಕ ನಿಗೂ ಕುತೂಹಲ. ಒಮ್ಮೆ ನೋಡಿದರೆ ತಪ್ಪೇನು ? ಎಂದುಕೊಂಡ. ಅದರಂತೆಯೇ ಇಬ್ಬರೂ ಮಧ್ಯ ರಾತ್ರಿ ಯಲ್ಲಿ ಬಾಗಿಲು ದಬ್ಬಿ ಒಳ ಹೋದರು. ಅರೆ ! ಆಶ್ಚರ್ಯ ಆ ತಕ್ಷಣವೇ ಅವಳು ಪುನಃ ರಾಣಿ ಹಂಸೆಯಾಗಿ ಪುರ್ರನೆ ಕಿಟಕಿಯಲ್ಲಿ ಹಾರಿಹೋದಳು. ಅರ್ಧ ನೇಯ್ದ ಬಟ್ಟೆ ಚಾಪೆಯ ಮೇಲೆ ಬಿದ್ದಿತ್ತು. ಹುಡುಗ ಅದನ್ನು ತಬ್ಬಿ ಬೋರನೆ ಅತ್ತ. ತಂದೆಯ ಮಾತು ಕೇಳಿ ಕೆಟ್ಟೆ ಎಂದು ಗೋಳಾಡಿದ.

— o —

ಜ್ಞಾನ ದಾರಿದ್ರ್ಯ ಭೌದ್ಧಿಕ ದಾರಿದ್ರ್ಯ
ನೀಗಿಸುವುದೇ ಮಾನವೀಯತೆ
ಪರಿಸರದ ಕುಂದು ಕೊರತೆಗಳ
ನೀಗಿಸುವುದೇ ಮಾನವೀಯತೆ

—o—

# ಸಂಪಂಗಿ ರಾಮು

ಸಂಪಂಗಿ ರಾಮು ಬಡ ಹುಡುಗ. ಬಡವ ಎಂದರೆ ಅತೀ ಬಡವ.

ಅವನ ತಾಯಿ ಕೂಲಿ ಕೆಲಸ ಮಾಡಿ ಬದುಕು ನಡೆಸು ತಿದ್ದಳು. ಹಣದ ಕೊರತೆಯಿಂದ ಮಗನನ್ನು ಶಾಲೆಗೆ ಸೇರಿಸಲಿಲ್ಲ. ಎರಡು ಹೊತ್ತು ಊಟ ಸಿಗುವುದೂ ಕಷ್ಟ, ಎಂದಮೇಲೆ ಎಲ್ಲಿಯ ವಿದ್ಯೆ ?

ಅವನು ಇತರ ಮಕ್ಕಳು ಶಾಲೆಗೆ ಬಸ್ಸು ಕಾರುಗಳಲ್ಲಿ ಬರುವುದನ್ನು ದಿನವೂ ನೋಡುತಿದ್ದ. ನನಗೆ ಶಾಲೆಯೂ ಇಲ್ಲ. ಬಸ್ಸು ಕಾರುಗಳೂ ಇಲ್ಲ ಎಂದು ತನ್ನಲ್ಲೇ ನೊಂದು ಕೊಂಡು ತಾಯಿಯನ್ನು ಕೇಳಿದ "ಅಮ್ಮಾ ! ಇತರ ಮಕ್ಕಳು ರಂಗುರಂಗಿನ ಬಟ್ಟೆತೊಟ್ಟು ಬಸ್ಸಿನಲ್ಲಿ ಶಾಲೆಗೆ ಬರುತ್ತಾರೆ. ನನಗೇನೂ ಇಲ್ಲವಲ್ಲಾ, ಅದೇಕೆ ?"

"ನೀನು ಅದೃಷ್ಟಮಾಡಿ ಹುಟ್ಟಲಿಲ್ಲ ಮಗನೇ !"

"ಅಂದರೆ ?"

"ನೀನು ಹಣವಂತರ ಮನೆಯಲ್ಲಿ ಹುಟ್ಟಿದ್ದಿದ್ದರೆ ಅದೆಲ್ಲಾ ನಡೆಯುತಿತ್ತು. ನನ್ನದು ಕೂಲಿ ಜೀವನ. ಇದೆಲ್ಲಾ ಸಾಧ್ಯವೇ ?"

"ಹೋಗಲಿ, ಒಂದಿನ ಸ್ವಲ್ಪದೂರ ಬಸ್ಸಿನಲ್ಲಿ ಕರೆದು ಕೊಂಡು ಹೋದರೆ ಸಾಕು. ಅಷ್ಟೂ ಮಾಡಲಾರೆಯಾ ?"

"ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ನಿನಗೆ ಬಸ್ಸಿನ ಆಸೆ."

"ಅಮ್ಮಾ...ಅಮ್ಮಾ !"

"ನನ್ನ ಜೀವನವೇ ನನಗೆ ಭಾರ. ಇದರ ಮೇಲೆ ನಿನ್ನದೊಂದು ಗೋಳು !"

"ಅಮ್ಮಾ ! ದಮ್ಮಯ್ಯಾ ಅಂತೀನಿ..."

ಹುಡುಗ ಗೋಗರೆಯುತ್ತಲೇ ಇದ್ದ. ಅವನಿಗೆ ಬಡ ತನದ ಅರಿವು ಏನೇನೂ ಇರಲಿಲ್ಲ. ತಾಯಿ ಹೇಳಿದುದಕ್ಕೆ ಹೂಗುಟ್ಟುತಿದ್ದ ಅಷ್ಟೆ. ಮನದಲ್ಲೇ ಕೊರಗಿ ಕರಗುತ್ತ ಬಸ್ಸು ಕಾರುಗಳು ಓಡಾಡುವುದನ್ನು ಕಣ್ತುಂಬ ನೋಡುತಿ ದ್ದರೆ ಬತ್ತಿದ ಕಣ್ಣುಗಳಲ್ಲಿ ಆಸೆಯ ಛಾಯೆ ಘನಿಸುತಿತ್ತು.

ಒಮ್ಮೆ ಸಂಪಂಗಿ ರಾಮು ತಾಯಿಯನ್ನು ಕೇಳಿದ "ಬಸ್ಸಿನ ಪಯಣಕ್ಕೆ ಎಷ್ಟು ದುಡ್ಡು ಬೇಕು ?"

"ಎಷ್ಟುದೂರ ಪಯಣಿಸುತ್ತೇವೋ ಅಷ್ಟು. ಹತ್ತು ಮೈಲಿ ದೂರಕ್ಕೆ ಒಂದೋ ಎರಡೋ ರೂಪಾಯಿ ಇರಬೇಕು."

"ನಿನ್ನ ಬಳಿ ಒಂದೆರಡು ರೂಪಾಯಿಯೂ ಇಲ್ಲವೇ ಅಮ್ಮಾ !"

"ಇದ್ದರೆ ಹೊಟ್ಟೆಗೆ ಬೇಡವೇ ಮಗೂ ?"

ಹುಡುಗನ ಬಾಯಿ ಕಟ್ಟಿತು. ಸುಮ್ಮನೆ ಜೋಲು ಮುಖ ಹಾಕಿಕೊಂಡ.

ತಾಯಿಗೂ ಮಗನ ಗತಿ ಕಂಡು ಸಂಕಟ. ಆದರೆ ಮಾಡುವುದೇನು? ದಿನವೆಲ್ಲಾ ದುಡಿಯುವುದರಲ್ಲಿ ಮತ್ತೊಂದನ್ನು ಯೋಚಿಸಲೂ ಸಮಯವಿಲ್ಲ.

ಮನೆಯಿಂದ ಸ್ವಲ್ಪದೂರದಲ್ಲೇ ಮಕ್ಕಳ ಶಾಲೆ. ಒಂದೇ ಬಸ್ಸು ಎರಡು ಬಾರಿ ಮಕ್ಕಳನ್ನು ಅಲ್ಲಿಗೆ ಕರೆತರುತ್ತದೆ. ಅದರ ಕೆಂಪು ರಂಗಿನ ಮಿಂಚು ಬಣ್ಣವನ್ನು ನೋಡಿದಷ್ಟೂ ಸಾಲದು. ಮಕ್ಕಳೆಲ್ಲಾ ಕೇಕೆ ಹಾಕಿ ನಗುತ್ತ ಬಸ್ಸಿನಿಂದ ಇಳಿದು ಬಂದರು. ಶಾಲೆಯ ಹೊರಗೇ ನಿಂತಿದ್ದ ಬಸ್ಸು ಹಿಂದಿರುಗಿ ದೊಡ್ಡ ಸದ್ದಿನೊಡನೆ ಹೊರಟುಹೋಯಿತು. ಸಂಪಂಗಿ ರಾಮ ಅದು ಕಣ್ಮರೆಯಾಗುವವರೆಗೂ ನಿಂತು ನೋಡಿದ. ಅದು ಎಷ್ಟು ವೇಗವಾಗಿ ಚಲಿಸುತ್ತದೆ ಎಂಬುದು ಆಶ್ಚರ್ಯ.

ಎರಡು ಮೂರು ದಿನಗಳು ಕಳೆದುವು.

ಇತ್ತ ತಾಯಿಯ ಬಡತನವೂ ಅರ್ಥವಾಗದು. ಅತ್ತ ಶ್ರೀಮಂತರ ಸಿರಿತನವೂ ಅರ್ಥವಾಗದು. ಈಚೀಚೆಗೆ ಪಿಳಿಪಿಳಿ ನೋಡುವ ಆ ಕಣ್ಣುಗಳಿಗೆ ಶಾಲೆಯಾಗಲೀ ಪುಸ್ತಕಗಳಾಗಲೀ ವಿಶೇಷವಲ್ಲ. ಬಸ್ಸು ! ಅದೇ ಹೆಚ್ಚಿನ ವಿಶೇಷ !

ಅಂದು ಬೆಳಿಗ್ಗೆ ಸಂಪಂಗಿ ರಾಮ ಬಸ್ಸಿನ ನಿಲ್ದಾಣಕ್ಕೆ ಹೋದ. ಸಾಲಾಗಿ ಅನೇಕ ಬಸ್ಸುಗಳು ನಿಂತಿದ್ದುವು. ಒಂದು ಬಸ್ಸಿಗೆ ಹತ್ತಿ ಒಳಗೆಲ್ಲಾ ಓಡಾಡಿ ನೋಡಿದ. ಸೀಟಿನಮೇಲೆ ಕುಳಿತು ಆನಂದಪಟ್ಟ. ಅನಂತರ ಮತ್ತೊಂದು ಬಸ್ಸನ್ನು ಏರಿದ. ಅಲ್ಲಿಯೂ ಅಷ್ಟೆ, ನಿಂತಲ್ಲಿ ನಿಲ್ಲದೆ ಒಳಗೆಲ್ಲಾ ಓಡಾಡಿದ. ಒಂದು ಮೂಲೆಯಲ್ಲಿ ಕೈವಸ್ತ್ರದಿಂದ

ಕಟ್ಟಿದ ಒಂದು ಪುಟ್ಟ ಗಂಟು ಕಂಡಿತು. ಬಹುಶಃ ಕಡಲೆ ಕಾಯಿ ಇರಬಹುದೇನೋ ಎನಿಸಿ ಕೈಗೆತ್ತಿಕೊಂಡರೆ ತುಂಬಾ ಭಾರ. ಆಶ್ಚರ್ಯದಿಂದ ಗಂಟು ಬಿಚ್ಚಿ ನೋಡಿದ. ಒಳ ಗಡೆ ನವುರಾದ ಕಾಗದದಲ್ಲಿ ಸುತ್ತಿದ ಚಿನ್ನದ ಹಾರ !

ಸ್ವಲ್ಪಹೊತ್ತು ಯೋಚಿಸಿದ. ಈಗೇನು ಮಾಡಲಿ?

ಆದಿನ ಚಿಕ್ಕಪ್ಪ ಹೇಳಿದ್ದ "ನನಗೊಂದು ಸರ ಸಿಕ್ಕಿತ್ತು; ಪೋಲೀಸ್ ಸ್ಟೇಷನ್ನಿಗೆ ತಲುಪಿಸಿದೆ. ಅವರು ನನಗೆ ನೂರು ರೂಪಾಯಿ ಬಹುಮಾನ ಕೊಟ್ಟರು !"

ಹಾಂ ! ನಾನು ಕೊಟ್ಟರೆ ನನಗೂ ಬಹುಮಾನ ಬರ ಬಹುದು ! ಆ ಯೋಚನೆ ಬಂದದ್ದೇ ತಡ ಅವನು ಹತ್ತಿರ ದಲ್ಲಿದ್ದ ಪೋಲೀಸ್ ಸ್ಟೇಷನ್ನಿಗೆ ಓಡುತ್ತಲೇ ಹೋದ.

ಬಾಗಿಲಲ್ಲಿದ್ದ ಪೋಲೀಸ್ ಹುಡುಗನನ್ನು ಜೋರಿ ನಿಂದ ಕೇಳಿದ "ಏಯ್ ! ಏಕೆ ಬಂದೆ ?"

"ಬುದ್ಧಿಯವರನ್ನು ನೋಡಬೇಕು."

"ಏಕೆ ?"

"ಅದೊಂದು ಗುಟ್ಟು !"

"ಎಲೆಲೆ, ಹುಡುಗ ! ಏನು ಕಾಳಜಿಯೋ ನಿನಗೆ ? "

"ನನಗೇನೂ ಆಗಿಲ್ಲ. ಬುದ್ಧಿಯವರನ್ನು ನೋಡ ಬೇಕು ಅಷ್ಟೆ."

ಪೋಲೀಸ್ ಬೆನ್ನಿನಮೇಲೆ ಗುದ್ದಿ "ಏನು ಗುಟ್ಟೋ ಅದು ?" ಎಂದು ಅಬ್ಬರಿಸಿದ.

ಹುಡುಗ ಜೋರಾಗಿ ಅಳುತ್ತ "ಸುಮ್ಮನೆ ನನ್ನ ಹೊಡೆದದ್ದೇಕೆ ?" ಎಂದ.

ಆ ವೇಳೆಗೆ ಅಲ್ಲಿಗೆ ಬಂದ ಇನ್ಸ್‌ಪೆಕ್ಟರ್ ಕೇಳಿದ "ಏನಪ್ಪಾ ಮಗೂ ?"

ಹುಡುಗ ಎರಡೂ ಕೈಗಳಿಂದ ಕಣ್ಣುಗಳನ್ನು ಒರಿಸಿ ಕೊಂಡು "ಬುದ್ಧಿಯವರನ್ನು ನೋಡೋಣವೆಂದು ಬಂದರೆ ಸುಮ್ಮನೆ ಹೊಡೆದಿದ್ದಾನೆ ತಪ್ಪೂ ಇಲ್ಲ. ಏನೂ ಇಲ್ಲ."

"ಯಾಕಯ್ಯಾ ಹೊಡೆದೆ ?"

"ಏಕೆ ಬಂದೆ ಎಂದರೆ ಹೇಳಲಿಲ್ಲ. ತುಂಬಾ ಧಿಮಾಕು ಹುಡುಗನಿಗೆ."

"ಅದಕ್ಕೇಕೆ ಹೊಡೆತ ?" ಎಂದ ಇನ್ಸ್‌ಪೆಕ್ಟರ್ "ಏಕೆ ಬಂದೆ ಮಗೂ ?" ಎಂದು ಸಂಪಂಗಿಯನ್ನು ಕೇಳಿದ.

"ನೀವೇನಾ ಬುದ್ಧಿಯವರು ?"

"ಹೌದು. ಏನಾಗಬೇಕಿತ್ತು ಹೇಳು ?"

"ಬಸ್ಸಿನಲ್ಲಿ ನನಗೊಂದು ಸರ ಸಿಕ್ಕಿದೆ. ನಿಮಗೆ ಒಪ್ಪಿಸೋಣವೆಂದು ಬಂದೆ."

ಸಂಪಗಿ ರಾಮು ಜೇಬಿನಲ್ಲಿದ್ದ ಚಿಕ್ಕಗಂಟನ್ನು ಅವರ ಕೈಗಿಟ್ಟು ಮುಖಭಾವವನ್ನು ನೋಡಿದ.

"ಓ ! ನಿಜವಾಗಿಯೂ ಚಿನ್ನದ ಸರವೇ ! ಇದು ನಿನಗೆ ಸಿಕ್ಕಿದ ಬಗೆ ?"

ಸಂಪಂಗಿ ರಾಮು ಸ್ವಲ್ಪವೂ ಮರೆ ಮಾಚದೆ ವಿಷಯ ವನ್ನು ತಿಳಿಸಿದ. ಇನ್ಸ್‌ಪೆಕ್ಟರನಿಗೆ ತುಂಬಾ ಆನಂದ ವಾಯಿತು. ಹುಡುಗನ ಬೆನ್ನು ತಟ್ಟಿ ಅಂದ "ನೀನು ತಂದುಕೊಟ್ಟುದುದಕ್ಕೆ ನಿನಗೆ ಬಹುಮಾನ ಕೊಡುವೆ. ನಿನ್ನ ವರು ಯಾರಿದ್ದಾರೆ ?"

"ನೀವು ಬಹುಮಾನ ಕೊಡಬಲ್ಲಿರಾದರೆ ನನಗೆ ಹಣ ಬೇಡ. ಎಲ್ಲಾ ಮಕ್ಕಳೂ ಶಾಲೆಗೆ ಹೋಗುತ್ತಾರೆ. ನನ್ನನ್ನೂ ಶಾಲೆಗೆ ಹೋಗುವಂತೆ ಮಾಡಿರಿ. ನನಗೆ ಬಸ್ಸಿನಲ್ಲಿ ಶಾಲೆಗೆ ಹೋಗುವುದು ಇಷ್ಟ."

"ಪರವಾಯಿಲ್ಲ. ಬಹಳ ಬುದ್ಧಿವಂತ ಹುಡುಗನಿದ್ದಿ. ಒಳ್ಳೆಯದನ್ನೇ ಕೇಳಿಕೊಂಡಿರುವೆ."

"ನನಗೆ ತಂದೆ ಇಲ್ಲ. ಬಡ ತಾಯಿ ಇದ್ದಾಳೆ. ಅವಳ ದಿನಗೂಲಿಯಿಂದ ನಮ್ಮ ಬದುಕು. ಪುಸ್ತಕ ಕೊಳ್ಳಲು ಹಣವಿಲ್ಲ."

"ಒಳಗೆ ಬಾ, ಮಗೂ! ನಿನ್ನ ಕಷ್ಟಕ್ಕೆ ಏನಾದರೊಂದು ಪರಿಹಾರ ಹುಡುಕೋಣ."

ಸಂಪಂಗಿ ರಾಮು ಹಿಂದೆಯೇ ಒಳಹೋದ. ಇನ್ಸ್ಪೆಕ್ಟರ್ ತನ್ನ ಧನಿಕ ಸ್ನೇಹಿತನಿಗೆ ದೂರವಾಣಿಯಲ್ಲಿ ಕರೆ ಕೊಟ್ಟು "ನಿನಗೊಬ್ಬ ಒಳ್ಳೆಯ ಮಗ ಬೇಕು ಎನ್ನುತಿದ್ದೆಯಲ್ಲಾ, ಇಲ್ಲೊಬ್ಬ ಪ್ರಮಾಣಿಕ ಹುಡುಗನಿದ್ದಾನೆ! ಬಂದು ನೋಡು !" ಎಂದ.

ಮಕ್ಕಳಿಲ್ಲದ ಆತ ಆನಂದದಿಂದ ಮಡದಿಯೊಂದಿಗೆ ಬಂದಿಳಿದ.

ಇನ್ಸ್ಪೆಕ್ಟರ್ ಹುಡುಗನಿಗೆ ಮತ್ತು ಗೆಳೆಯನಿಗೆ ಹೇಳುವಷ್ಟು ಹೇಳಿ ಗೆಳೆಯನಿಗೆಂದ,

"ಅವನ ತಾಯಿಯನ್ನು ಕಂಡು ಒಂದು ಮಾತು ಕೇಳಿ ಕರೆದುಕೊಂಡು ಹೋಗು. ಆಕೆ ಏನು ಹೇಳುತ್ತಾಳೋ" ಎಂದ.

ಆ ಸ್ನೇಹಿತನಿಗೂ ಅದು ಸರಿಯೆನಿಸಿತು. ಅವನ ತಾಯಿಯನ್ನು ಕಂಡು ಮಾತಾಡಿ ಹುಡುಗನ ಕ್ಷೇಮವನ್ನು ತಾನು ವಹಿಸಿಕೊಂಡ. ಸಂಪಂಗಿ ರಾಮು ಓದಿ ವಿದ್ಯಾವಂತನಾದ.

—o—

ಈ ಮಹಾ ವಿಶ್ವ ಪ್ರಪಂಚದ
ಆದ್ಯಂತ ಅಳೆಯಲಾಸಲ್ಲ !
ಈ ಮಹಾ ವಿಶ್ವಕಾಶದ
ಉದ್ದಗಲ ಅರಿಯಲಾಸಲ್ಲ.
ನಿನ್ನ ಪುಟ್ಟ ಜೀವನೀಯ
ಆಳ-ನೀಳವನು ಶ್ರದ್ಧೆಯಿಂ
ಅರಿತುಕೊ ಮುದ್ದು ಮಗುವೆ !

— o —

## ಚಿರಾಡಿ

ಮುದ್ದು ಮರಿ ಚಿಂಪಾಂಜಿ. ಅದರ ಹೆಸರು ಚಿರಾಡಿ.

ಅದರ ಒಡತಿ ಹೇಮ ಒಳ್ಳೆಯ ಸಂಗೀತಗಾತಿ. ಸದಾ ನಿಂತಲ್ಲಿ, ಕುಳಿತಲ್ಲಿ ಚಿಟಿಕಿ ಹಾಕುತ್ತ ಹಾಡಿಕೊಳ್ಳುವ ರೂಢಿ. ಆ ಸಂಗೀತ ಕೇಳಿ ಕೇಳಿ ಅದಕ್ಕೂ ಕಲಿಯುವ ಆಸೆ. ಅವಳು ಹಾಡುತಿದ್ದರೆ ಅದರ ಕಿರ್ ಕಿರ್ ಕಿರ್ ರಾಗ ಶುರು. ಅವಳು ಕಿಲಕಿಲ ನಕ್ಕರೆ ಅದಕ್ಕೂ ಖುಷಿ. ಕಿರ್ ಕಿರ್ ರಾಗಕ್ಕೆ ಮತ್ತಷ್ಟು ಹುರುಪು. ಪಿಯಾನೋ ಮನೆಗಳನ್ನು ಒತ್ತಿ ಸ್ವರ ಹೊರಡಿಸುವುದನ್ನು ತೋರಿಸಿದಳು ಹೇಮ. ಅದು ಎರಡು-ಮೂರು ಮನೆಗಳನ್ನು ಒಟ್ಟೊಟ್ಟಿಗೆ ಒತ್ತಿತು. ವರ್ರ್ರೋ ಎಂದಿತು ಸ್ವರ.

ಸ-ರಿ-ಗ-ಮ ನುಡಿಸಿದಳು ಹೇಮ.

ಚಿರಾಡಿ ಮತ್ತೆ ಪ್ರಯತ್ನಿಸಿತು. ವರ್ರ್ರೋ ವರ್ರ್ರೋ ವರ್ರ್ರೋ !

ಹೇಮ ಗಟ್ಟಿಯಾಗಿ ನಕ್ಕಳು.

ಮನೆಯ ಹಿಂಬದಿಯಲ್ಲಿದ್ದ ಕಿರು ಕೋಣೆ ಚಿರಾಡಿಯ ಮನೆ. ಹೇಮ ಅದನ್ನು ಅಲ್ಲಿ ಕೂಡಿ ಶಾಲೆಗೆ ಹೋದಳು. ಅದು ಕಿರ್ರನೆ ಕಿರಿಚಿ ಗಲಾಟೆಯೆಬ್ಬಿಸಿತು ಬೇಸರದಿಂದ. ಟಾಮಿ ನಾಯಿಗೆ ಅದರ ಮೇಲೆ ಕರುಣೆ ಮೂಡಿತು. ಟಾಮಿ ಮುಂಗಾಲನ್ನು ಕಿಟಿಕಿಗೆ ಊರಿ ನಿಂತು ಮೂತಿಯನ್ನು ಒಳತೂರಿ ಮುದ್ದಿನ ದನಿ ಹೊರಡಿಸಿತು ಬೌವ್ವ್ವಾವೂವೂವೂ ?

ಚಿರಾಡಿಗೆ ಸಿಟ್ಟು ಅದರ ಮೇಲೆ. ಒಡತಿ ಅದನ್ನು ಕಟ್ಟುವುದೂ ಇಲ್ಲ; ಕೂಡುವುದೂ ಇಲ್ಲ. ಅದು ಯಾವತ್ತೂ ಸ್ವತಂತ್ರವೇ. ಕೈಯೆತ್ತಿ ಟಪ್ಪನೆ ಬಡಿಯಿತು ಮೂತಿಯ ಮೇಲೆ. ಟಾಮಿಗೀಗ ಸೇಡು ತೀರಿಸಿಕೊಳ್ಳುವ ಚಟ ಮೂಡಿತು. ಮೊದಲು ನಂಬಿಕೆಗಾಗಿ ಸೀಬೆ ಹಣ್ಣೊಂದನ್ನು ಹೆಕ್ಕಿ ತಂದುಕೊಟ್ಟಿತು. ಅದನ್ನು ಕರಂ ಕರಂ ಅಗಿದು ತಿಂದಿತು ಚಿರಾಡಿ.

"ಇನ್ನೊಂದು ಕೊಡು ಟಾಮಿಾ !" ಗೋಗರೆಯಿತು ಚಿರಾಡಿ.

ಈ ಸಲಿ ಟಾಮಿ ಮಾಡಿದ್ದೇನು ? ಎಳೆಂಟು ಹಸಿ ಮೆಣಸಿನ ಕಾಯಿಗಳನ್ನು ಒಂದು ಎಲೆಯಲ್ಲಿ ಸುತ್ತಿ ಅದರ ಬಾಯಿಗೆ ಕೊಟ್ಟಿತು. ಅದು ಸೀಬೆ ಹಣ್ಣೆಂದೇ ಭಾವಿಸಿ ಅಗಿದು ತಿಂದರೆ ಬಾಯೆಲ್ಲಾ ಉರಿ ; ತಾಳಲಾಗದ ಉರಿ... ಹಾ ಹೂ ಎನ್ನುತ್ತ ಉಗಿದು ಚಿರಾಡಿ ಕಣ್ಣುಗಳಲ್ಲಿ ಬಳ ಬಳ ನೀರು ಸುರಿಸಿ "ಛೀ ! ಎನು ಮಾಡಿಬಿಟ್ಟೆ ?" ಎಂದಿತು ಸಿಟ್ಟಿನಿಂದ.

"ನಿನಗೆ ಹಾಗೇ ಆಗಬೇಕು ! ನನಗೇಕೆ ಹೊಡೆದೆ ?"

"ಈಗೇನು ಮಾಡಲಿ ! ಹಲ್ಲು ಸಂದಿಯಲ್ಲಿ ಇನ್ನೂ ಇದೆ. ಮೆಣಸಿನಕಾಯಿ !"

"ಅಗಿದು ತಿಂದು ಬಿಡು. ಬೌವ್ವೂವ್ವೂವ್ವೂ !"

"ನಾನು ತಾಳಲಾರೆ ಕಿರ್ರ್ ಕಿರ್ರ್ ಕಿರ್."

ಅದೇ ವೇಳೆಗೆ ಶಾಲೆಯಿಂದ ಒಡತಿ ಬಂದಳು. ಚಿರಾಡಿಯ ತಲೆ ತಟ್ಟಿ "ಏನಾಯಿತು ನಿನಗೆ ! ಕಣ್ಣಿನಲ್ಲೇಕೆ ನೀರು ?"

ಕೆಳಗೆ ನೋಡುತ್ತಾಳೆ ! ಚೂರು ಚೂರಾದ ಮೆಣಸಿನ ಕಾಯಿಗಳು !

"ಇದೇನು, ಎಲ್ಲಿಂದ ಬಂತು ?"

ಟಾಮಿ ನಡೆದ ವಿಷಯ ತಿಳಿಸಿ "ನಾನೇ ಅದಕ್ಕೆ ತಂದು ಕೊಟ್ಟೆ !" ಎಂದಿತು.

"ಪಾಪ, ಚಿರಾಡಿ. ಇರು, ನಾನು ಬಾಯಿ ಸಿಹಿ ಮಾಡುವೆ" ಎಂದ ಹೇಮ ಒಳಹೋಗಿ ಬೆಲ್ಲದ ಅಚ್ಚನ್ನು ತಂದು ಅದರ ಬಾಯಿಗಿಟ್ಟಳು. ಅದು ಚಕ ಚಕ ಅಗಿಯಿತು.

"ಹಾ ಎಂತಹ ಸಿಹಿ !"

"ಹೌದು. ಬೆಲ್ಲ ತುಂಬ ಸಿಹಿ. ಚೆನ್ನಾಗಿ ಅಗಿದು ತಿನ್ನು."

ಹೇಮ ಅದನ್ನು ನಡುಮನೆಗೆ ಕರೆತಂದಳು. ಟಾಮಿ ಬಲಗಡೆ. ಚಿರಾಡಿ ಎಡಗಡೆ. ಎರಡೂ ಕಡೆ ತಬ್ಬಿ ಹಿಡಿದು

ಕೊಂಡು ಮುದ್ದಿಸಿ ತಲೆತಟ್ಟಿ ನೇವರಿಸಿ ಮುದ್ದು ಮಾತುಗಳಲ್ಲಿ ಹಾಡಿದಳು "ರಘುಪತಿ ರಾಘವ ರಾಜಾರಾಂ!"

ಚಿರಾಡಿ ಆ ಕೂಡಲೇ ಹಾಡಿತು ಕಿರ್ ಕಿರ್ ಕಿರ್ ಕಿರ್ !

ಟಾಮಿ ತನ್ನ ದನಿಯನ್ನು ಆದಷ್ಟು ನವುರುಗೊಳಿಸಿ ಹಾಡಿತು ಬೌವ್ವ್ವಾವೂವೂವೂ !

"ಪತಿತ ಪಾವನ ಸೀತಾರಾಂ !" ಹಾಡಿ ಚಪ್ಪಳೆಯಿಕ್ಕಿದಳು ಹೇಮ.

ಎರಡೂ ಒಂದಕ್ಕೊಂದು ಪೈಪೋಟಿ ನಡೆಸುವಂತೆ ತಮ್ಮತಮ್ಮ ದನಿಯನ್ನು ಪುನಃ ಹರಿಯ ಬಿಟ್ಟುವು.

ಹೇಮ ಗಟ್ಟಿಯಾಗಿ ನಕ್ಕಳು.

— o —

ಅಸಭ್ಯ ಸಹವಾಸ ಸಲ್ಲ
ಸಲ್ಲದವರೊಡನೆ ಕೂಡಾಡಿ
ಹರಟೆದರೆ ಬುದ್ಧಿ ಕೆಡಗು
ಸನ್ಮಾನ್ಯರ ಕೂಡೆ ಸಹಚರಿಸಿ
ಸಜ್ಜನನಾದೊಡೆ ಸಗ್ಗ ದೂರವಲ್ಲ.

—o—

# ಹಗರಣ

ಒಂಭತ್ತು ದಿನಗಳ ದಸರೆ ರಜೆ.

ಪಾಂಚಾಲಿಗೆ ಪ್ರೇಕ್ಷಣೀಯ ಸ್ಥಳಗಳಿಗೆ ಹೋಗಿಬರ ಬೇಕೆಂಬ ಆಸೆ.

ಆರನೆಯ ತರಗತಿಯಲ್ಲಿ ಉತ್ತೀರ್ಣಳಾದಾಗಲೇ ತನ್ನ ಅಭಿಲಾಷೆಯನ್ನು ತಂದೆಯ ಮುಂದಿಟ್ಟಳು. ಬೇಸಿಗೆ ರಜೆಯಲ್ಲಿ ಎಲ್ಲೂ ಹೋಗಲಾಗಲಿಲ್ಲ. ಆದ್ದರಿಂದ ದಸರೆ ರಜೆಯಲ್ಲಿ ನೋಡೋಣ ಎಂದಿದ್ದರು ತಂದೆ. ಈ ಸಲವೂ ಹಾಗಾಗಬಾರದೆಂದು ಪದೇ ಪದೇ ನೆನಪಿಸುತ್ತಲೇ ಬಂದಿದ್ದಳು ಪಾಂಚಾಲಿ. ಮುದ್ದು ಮಗಳ ಮಾತಿಗೆ ಒಪ್ಪಿ ನುಡಿದ ತಂದೆ-ಮೂರ್ತಿ.

"ಆಗಲಿ, ಮಗಳೇ ! ಈ ಸಲಿ ಮೈಸೂರು ಕಡೆಗೆ ಹೋಗಿ ಬರೋಣ."

ಪಾಂಚಾಲಿಗೆ ಆನಂದವೋ ಆನಂದ. ತನ್ನ ಗೆಳತಿಯರಿಗೆ ತನ್ನ ಪ್ರವಾಸದ ಸುದ್ದಿಯನ್ನು ತಿಳಿಸಿ ಬಂದಳು. ಮೈಯೆಲ್ಲ ನಿಗಿನಿಗಿ ನಲಿಯುವಷ್ಟು ಉತ್ಸಾಹ.

ಅಂದು, ಬೆಳಿಗ್ಗೆ ಅಷ್ಟು ಹೊತ್ತಿಗೇನೇ ಮನೆಗೆ ಬೀಗ ಹಾಕಿ ಮಡದಿ ಮತ್ತು ಮಗಳೊಂದಿಗೆ ಮೂರ್ತಿ ಬಸ್ಸಿನ

ನಿಲ್ದಾಣ ತಲ್ಪಿದ. ಬಸ್ಸು ತುಂಬಿ ತುಳುಕುವಷ್ಟು ಜನ ಒತ್ತಡ. ಉಸಿರು ಕಟ್ಟಿಸುವಷ್ಟು ತುಂಬಿದ ಜನರನ್ನು ನೋಡಿದಾಗ ಒಮ್ಮೆ ಬಸ್ಸಿನ ಪ್ರಯಾಣ ಮುಗಿದರೆ ಸಾಕು ಎಂಬಷ್ಟು ಬೇಸರ-ಕಿನಿಸಿಗೆ.

ಪಯಣ ಸ್ವಲ್ಪದೂರ ಸಾಗಿತ್ತು.

ಹಿಂದಿನ ಸೀಟಿನಲ್ಲಿ ಕುಳಿತಿದ್ದ ಹೆಂಗಸು ಇದ್ದಕ್ಕಿದ್ದಂತೆಯೇ ಗಬಕ್ಕನೆ ವಾಂತಿ ಮಾಡಿದಳು. ಸುತ್ತಮುತ್ತಲಿನ ಎಲ್ಲರಿಗೂ ಅದರ ಸಂಪ್ರೋಕ್ಷಣೆ ಆಯಿತು ! ಮುಂದಿನ ಸೀಟಿನಲ್ಲಿ ಕುಳಿತ ಮೂರ್ತಿ ಸಂಸಾರಕ್ಕೆ ವಾಂತಿಯ ಸ್ನಾನವೇ ಆಯಿತು.

ದುರ್ವಾಸನೆ ! ಮೈಯೆಲ್ಲಾ ಅಸಹ್ಯ !

ಪಯಣಿಗರು ಗದ್ದಲವೆಬ್ಬಿಸುತ್ತಲೂ ಬಸ್ಸು ನಿಂತಿತು. ಜನ ಕೆಳಗಿಳಿದರು. ಬಸ್ಸಿನಲ್ಲಿದ್ದ ನೀರು ತೊಳೆಯಲು ಏನೇನೂ ಸಾಲದು. ಪಾಂಚಾಲಿ ಒಂದೇ ಸಮನೆ ಅಳಲಾರಂಭಿಸಿದಳು.

ವಾಂತಿ ಮಾಡಿದ ಹೆಣ್ಣಿನ ಮೇಲೆ ಎಲ್ಲರೂ ಹರಿಹಾಯುತಿದ್ದರೆ ಅವಳಿಗೆ ಸಂಕಟ. ನೋಡುವವರಿಗೂ ಸಂಕಟ. ಜನರ ಗಜಿಬಿಜಿ. ಗುಜುಗುಜು.

"ಮುಂದೆ ಸ್ವಲ್ಪದೂರದಲ್ಲಿ ತೊರೆಯಿದೆ ಅಲ್ಲಿಗೆ ಹೋದ ನಂತರ ತೊಳೆದುಕೊಳ್ಳಬಹುದು. ಎಲ್ಲರೂ ಹತ್ತಿ !" ಎಂದ ಡ್ರೈವರ್.

ಕೆಳಗಿಳಿದವರೆಲ್ಲಾ ಬಸ್ಸಿಗೆ ಹತ್ತಲಾರದೇ ಹತ್ತಿದರು.

ಬಸ್ಸು ಮುಂದಿನ ತೊರೆಯಬಳಿಗೆ ಹೋಗಿ ನಿಂತಿತು. ಪಾಂಚಾಲಿ ತಾಯಿ ತಂದೆಯವರೊಂದಿಗೆ ತೊರೆಯ ಕಡೆ ಹೋದಳು. ಕೊಳಕು ತಟ್ಟಿದ ಇತರರೂ ಅತ್ತ ಧಾವಿಸಿದರು.

ಮುಖ-ಮೈ ಮಜ್ಜನ ಮಾಡಿ ಬಂದರೆ, ವಾಂತಿ ಮಾಡಿದ್ದ ಹೆಣ್ಣು ವಾಂತಿಯನ್ನು ಬಳಿದು, ಬಟ್ಟೆಯಿಂದ ಒರಿಸುತ್ತಿದ್ದಾಳೆ. ತೀರ ಬಳಲಿದ ಅವಳಿಗೆ ಸಹಾಯಕರಾರೂ ಇರಲಿಲ್ಲ.

ಪಾಂಚಾಲಿಯ ತಾಯಿ ಅವಳ ಸಹಾಯಕ್ಕೆ ಮುಂದಾದಳು. ತೊರೆಯ ಬಳಿಗೆ ಕರೆದೊಯ್ದು ಬಟ್ಟೆಗಳನ್ನು ತೊಳೆದು ಮುಖ ಮಜ್ಜನ ಮಾಡಿ ನೀರು ಕುಡಿದ ನಂತರ ತೋಳು ಹಿಡಿದು ಕರೆತಂದಳು. ಕಂಡಕ್ಟರ್ ಸಹಾಯಕ್ಕೆ ಮುಂದಾಗದುದನ್ನು ನೋಡಿದ ಮೂರ್ತಿ ನುಡಿದರು "ಇಂಥ ಸಂದರ್ಭದಲ್ಲಿ ಸಹಾಯ ಮಾಡದೆ ಸುಮ್ಮನಿದ್ದು ಬಿಡುವುದೇ ?"

ಅವನು ಲಕ್ಷಿಸಿದರೆ ತಾನೇ ? ತಿರಸ್ಕಾರದಿಂದ ಮುಖ ಸಿಂಡರಿಸಿದ.

ಅಂಥ ಮೂರ್ಖರೊಡನೆ ಮಾತು ಸಲ್ಲ ಎಂದು ಸುಮ್ಮನಾದ ಮೂರ್ತಿ.

ಬಸ್ಸು ಮೈಸೂರು ಮುಟ್ಟಿತು. ಅಲ್ಲಿ ಸ್ನಾನ-ಫಲಹಾರ ಮುಗಿಸಿ ನಂಜನಗೂಡಿಗೆ ಪಯಣ. ನಂಜನಗೂಡು ಮುಟ್ಟಿದಾಗ ಹನ್ನೊಂದು ಗಂಟೆಯ ಸಮಯ. ದೇವಸ್ಥಾನದಲ್ಲಿ ಪೂಜೆ ನಡೆಯುತ್ತಿತ್ತು. ವಿಪರೀತ ಜನ ಸಂದಣಿ. ಹೆಂಗಸರು ಮಕ್ಕಳು ತುಂಬಿ ಹೋಗಿದ್ದಾರೆ. ಮಾತು ಕತೆಯ ಗದ್ದಲ ; ನೂಕು ನುಗ್ಗಲು ಎಲ್ಲಾ ಇತ್ತು. ಜನರ ಗುಂಪಿನಲ್ಲಿ ನುಗ್ಗಿ ಬಂದ ಸಣ್ಣ ಕುರುಡ ಹುಡುಗಿ ಕೈ ಮುಂದೆ ಮಾಡಿ "ಅಮ್ಮಾ ! ಭಿಕ್ಷೆ ನೀಡಿ ಪುಣ್ಯ ಕಟ್ಟಿಕೊಳ್ಳಿ !" ಎಂದಳು.

"ನಿನಗೆ ಹೇಗಮ್ಮಾ ಕಣ್ಣು ಕುರುಡಾಯಿತು ?" ಕೇಳಿದಳು ಪಾಂಚಾಲಿಯ ತಾಯಿ.

ಹುಡುಗಿ ಮಾತಾಡಲಿಲ್ಲ. ಅವಳ ಪಕ್ಕದಲ್ಲಿದ್ದ ಇನ್ನೊಬ್ಬ ಹುಡುಗಿ ಹೇಳಿದಳು "ಭಿಕ್ಷೆ ಬೇಡಲಿಕ್ಕಾಗಿಯೇ ಅವಳಿಗೆ ಕುರುಡು ಮಾಡಿದ್ದು !"

"ಅಂದರೆ...?" ಆಶ್ಚರ್ಯದಿಂದ ಕೇಳಿದಳು ತಾಯಿ.

"ಚೆನ್ನಾಗಿದ್ದವರಿಗೆ ಭಿಕ್ಷೆಯಾರು ಕೊಡುತ್ತಾರೆ ಹೇಳಿ? ಅದಕ್ಕೇ ಅವಳ ಅಪ್ಪ ಮುಳ್ಳು ಚುಚ್ಚಿ ಕುರುಡಿ ಮಾಡಿದ್ದು!"

"ನಿಜವಾಗಿ...?"

"ಅವಳನ್ನೇ ಕೇಳಿ !"

"ಅಯ್ಯೋ, ದೇವರೇ !" ಕರುಣೆಯಿಂದ ಚೀರಿದಳು ತಾಯಿ.

"ಅಪ್ಪ ಕುಡಿದು ಕುಡಿದು ಸಾಯುವ ಹಾಗಿದ್ದಾನೆ. ಕೆಲಸ ಮಾಡೋಳು ಅಮ್ಮ ಮಾತ್ರ. ಅದಕ್ಕೇ..." ಅಲ್ಲಿಗೆ ಸುಮ್ಮನಾದಳು ಹುಡುಗಿ.

ಬಹುಶಃ ಆವಳಿಗೆ ತನ್ನ ಅಂಗವಿಕಲತೆ ಅರ್ಥವೇ ಆಗಿರಲಿಲ್ಲ. ಕರುಣೆಯಿಂದ ಮನಸ್ಸು ಕರಗಿತು. ಅವಳ ಕೈಗೆ ಐದು ರೂಪಾಯಿ ಕೊಟ್ಟು ಹಿಂದಿರುಗಿದರು.

ಆದರೆ, ಆ ಘೋರ ವೃತ್ತಾಂತ ಒಡಲಿಗೆ ಭರಿಸಲಾರದ ಸಂಕಟ ನೀಡಿತು...ಇಂಥ ಶತ ಮೂರ್ಖರಿಂದ ದೇಶ ಹಾಳಾಯಿತು ! ಜನ ಬುದ್ಧಿವಂತರಾಗಿ ಕಷ್ಟಸಹಿಷ್ಣುಗಳಾಗಿ ಶ್ರಮಜೀವಿಗಳಾಗಿ ಬಾಳದೆ ಹೋದರೆ ಆಗುವುದು ಹೇಗೆಯೋ... ಎಂಬ ದುಃಖ ಮೂವರಿಗೂ.

* * * *

ಶ್ರೀರಂಗ ಪಟ್ಟಣಕ್ಕೆ ಬಂದಾಗ ಬೆಳಗಿನ ಹತ್ತರ ಸಮಯ.

ಹವಾಮಾನ ಹಿತಕರವಾಗಿತ್ತು. ಟಿಪ್ಪು ಸುಲ್ತಾನನ ಅರಮನೆ ಮತ್ತು ಸಮಾಧಿಗಳನ್ನು ನೋಡಿಕೊಂಡು ಶ್ರೀರಂಗ ಸ್ವಾಮಿಯ ದೇವಸ್ಥಾನಕ್ಕೆ ಬಂದರು. ಪೂಜೆಯ ಗಂಟಾರವ ಮೊಳಗುತಿತ್ತು. ಜಾಗಟೆ ಶಂಖಗಳ ಧ್ವನಿಯೂ ಕೇಳಿ ಬರುತಿತ್ತು.

ಮೂವರೂ ದೇವಾಲಯವನ್ನು ಹೊಕ್ಕರು.

ಶಯನ ಭಂಗಿಯಲ್ಲಿದ್ದ ಶ್ರೀರಂಗ ಸ್ವಾಮಿಯ ಬೃಹದ್ ರೂಪವನ್ನು ಕಣ್ತುಂಬ ನೋಡಿ ಪೂಜೆ ಸಲ್ಲಿಸಿ ಹೊರ ಬಂದರೆ ತಮ್ಮ ಕಣ್ಣುಗಳನ್ನೇ ನಂಬಲಾಗದಂತಹ ಪ್ರಸಂಗ. ಅಲ್ಲೊಂದು ಬೂದು ಬಣ್ಣದ ಜೂಲು ನಾಯಿ...! ಅದನ್ನು ನೋಡುತ್ತಲೂ ಆಶ್ಚರ್ಯದಿಂದ ಬಾಯಿಯ ಮೇಲೆ ಬೆರಳಿಟ್ಟು ತಟ್ಟನೆ ಉದ್ರೇಕಗೊಂಡು ನುಡಿದಳು ಪಾಂಚಾಲಿ "ಅಮ್ಮಾ! ನಮ್ಮ ಜೂಲಿ!"

ತಾಯಿ ಅದರ ಕಡೆ ನೋಡಿರಲಿಲ್ಲ. ಮಗಳ ಮಾತಿನಿಂದ "ಏನು ?" ಎಂದಳು.

"ನಮ್ಮ ಜೂಲಿ ಇಲ್ಲಿದೆ! ಜೂಲೀ! ಜೂಲೀ!" ದನಿಯಲ್ಲಿ ಆನಂದಾಶ್ಚರ್ಯ ಉಕ್ಕಿತು.

ಆ ಕೆರೆಯಿಂದ ತಟ್ಟನೆ ಇತ್ತ ನೋಡಿದ ನಾಯಿ ಒಂದೇ ಜಿಗಿತಕ್ಕೆ ನೆಗೆದು ಓಡಿ ಬಂತು! ಎರಡೂ ಕಾಲುಗಳನ್ನು ಮೈಮೇಲೆ ಇಟ್ಟು ಮೈ ನೆಕ್ಕಿ ಕುಂಯಿ ಕುಂಯಿ ಎಂದು ಒಂದೇ ಸಮನೆ ಕುಂಯ್ ಗುಡಿಯುತ್ತ ಪ್ರೀತಿಯ ದನಿಯಲ್ಲಿ

ಬೊಗಳಿ ಮೂವರನ್ನು ಮುದ್ದುಗೈಯತೊಡಗಿತು. ಇವರೂ ಅದನ್ನು ತಬ್ಬಿ ಮುದ್ದಾಡಿದರು. ಆನಂದಸುಧೆ ಸ್ವರ್ಗ ಮುಟ್ಟಿತು.

ಆ ವೇಳೆಗೆ ಅಲ್ಲಿಗೆ ಬಂದವ ಹೇಳಿದ "ಸ್ವಾಮೀ ! ಈ ನಾಯಿ ಇಲ್ಲಿನ ದೇವಾಲಯದ ಧರ್ಮದರ್ಶಿಗಳಿಗೆ ಸೇರಿದ್ದು !"

"ಕಳೆದ ವರ್ಷ ನಮ್ಮ ಮನೆಯಿಂದ ತಪ್ಪಿಸಿಕೊಂಡ ನಾಯಿ ಅವರ ಕೈಗೆ ಸಿಕ್ಕ ಬಗೆ ?"

"ಅದೇನೋ ಗೊತ್ತಿಲ್ಲ ಸ್ವಾಮೀ !"

"ಅವರ ಮನೆಯೆಲ್ಲಿದೆ ? ಅವರಿದ್ದಾರೆಯೇ ಈಗ ?"

"ಮನೆಯಲ್ಲಿರಬಹುದು."

ಅವನಿಂದ ವಿಳಾಸ ತೆಗೆದುಕೊಂಡು ನಾಯಿಯೊಡನೆ ಮನೆಗೆ ಹೋದರೆ ಅದೊಂದು ದೊಡ್ಡ ಹಗರಣವಾಯಿತು. ಬಿಸಿ ಬಿಸಿ ಮಾತುಗಳಾದುವು. ಪಾಂಚಾಲಿಯ ಕಣ್ಣುಗಳಲ್ಲಿ ಬಳಬಳ ನೀರು ಹರಿಯಿತು. ಅಳುತ್ತ ನಿಂತಳು ಹುಡುಗಿ.

ಮಧ್ಯಾಹ್ನ ಎರಡು ಗಂಟೆಯಾಗಿದೆ. ಎಲ್ಲರಿಗೂ ಹಸಿವು. ನಾಯಿಯ ಸ್ವಾಮಿತ್ವ ಪಡೆಯದೆ ಹಿಂತಿರುಗಲು ಮನಸ್ಸಿಲ್ಲ. ಕೊನೆಗೆ ಪಾಂಚಾಲಿಯ ಪ್ರೀತಿ ಮನೋಭಾವಕ್ಕೆ ಮಣಿದು ಯಜಮಾನ ಒಪ್ಪಿಗೆ ಕೊಟ್ಟರೆ ಅವನ ಮನೆಯವರು ಆಕ್ಷೇಪವೆತ್ತಿದರು. ಅಂತೂ, ಆ ನಾಯಿಯನ್ನು ಪಡೆದು ಕೊಂಡಾಗ ಮಧ್ಯಾಹ್ನ ಮೂರು ಗಂಟೆ. ಆಗ ಪಾಂಚಾಲಿಗೆ ಇನ್ನೆಲ್ಲಿಗೂ ಹೋಗುವುದೇ ಬೇಡ ; ಸೀದಾ ಮನೆಗೇ ಹೋಗೋಣ ಎಂಬಷ್ಟು ಹುರುಪು. ಸುಖಾನಂದದ ಉತ್ಸಾಹ.

ಒಂಭತ್ತು ದಿಸಗಳ ಸುಖಯಾತ್ರೆ ಮುಗಿಸಿ ಜೂಲಿ ಯೊಡನೆ ಮನೆಗೆ ಬಂದಾಗ ಸಂಜೆ ಆರರ ಸಮಯ. ಮುಸ್ಸಂಜೆಯ ಪೆಂಪು ಎಲ್ಲ ಕಡೆಯೂ ಹರಡಿತ್ತು.

ಬಸ್ ನಿಲ್ದಾಣದಿಂದ ಟ್ಯಾಕ್ಸಿಯಲ್ಲಿ ಮನೆಗೆ ಬಂದಿದ್ದಾರೆ. ಸಾಮಾನು ಇಳಿಸುವವರೆಗೆ ರಸ್ತೆಯಲ್ಲೇ ಇದ್ದು. ಬಾಡಿಗೆ ಹಣಕೊಟ್ಟು ಕಳುಹಿಸಿ ಬಾಗಿಲು ತೆಗೆಯಲು ನೋಡಿದರೆ ಆಶ್ಚರ್ಯವೇ ಆಶ್ಚರ್ಯ-ಮೈಯ್ಯೆಲ್ಲಾ ಬಿಸಿಯಾಗುವಂತಹ ಆಶ್ಚರ್ಯ !

"ಇದೇನು ? ಅಗಣಿ-ಬೀಗ ಎಲ್ಲಾ ಬೇರೆಯಾಗಿದೆ ! ಅಯ್ಯೋ ! ದೇವರೇ ಕಳ್ಳರು ಮನೆ ದೋಚಿದ್ದಾರೆಂದು ತೋರುತ್ತೆ !" ಚೀರಿದ ಯಜಮಾನ !

"ಈಗೇನು ಗತಿ ?" ಎಂದಳು ಸ್ವಾಮಿನಿ, ಆಗಲೇ ಕಣ್ಣುಗಳಲ್ಲಿ ನೀರು.

ಅಷ್ಟರಲ್ಲಿ ನೆರೆಮನೆಯಾಕೆ ಬಂದು ನುಡಿದಳು,

"ಓ ! ಗಾಬರಿಯಾಗಬೇಡಿ ! ಮನೆಯ ಬಾಗಿಲನ್ನು ಬಲತ್ಕಾರವಾಗಿ ತೆಗೆಸುವ ಪ್ರಸಂಗ ಬಂತು. ಯಾವ ಸಾಮಾನೂ ಕಳುವಾಗಲಿಲ್ಲ. ನಮ್ಮೆಲ್ಲರ ಎದುರಿಗೇ ಪೋಲೀಸರು ಬೀಗ ಒಡೆದು ಬಾಗಿಲು ತೆರೆದರು !"

"ಏಕೆ? ಏಕೆ?? ಅಂತಹದ್ದೇನು?" ಗಾಬರಿಯಿಂದಲೇ ಕೇಳಿದಳು ಸ್ವಾಮಿನಿ.

ಅವಳು ಖೊಳ್ಳನೆ ನಕ್ಕು ನುಡಿದಳು "ನಮಗೆ ಈಗ ನಗು ಬರುತ್ತೆ. ಅಂದು ತುಂಬಾ ಗಾಬರಿಯಾಗಿದ್ದೆವು. ಈಗ ಎಲ್ಲೆಡೆಯೂ ಕಳ್ಳಕಾಕರ ಗಲಾಟೆ ನೋಡಿ ! ನಾವು

ಏನೋ ಅನಾಹುತ ಆಗಿದೆಯೆಂದು ದೃಢವಾಗಿ ನಂಬಿ ತುಂಬಾ ಕಳವಳ ಪಟ್ಟೆವು. ನೀವು ಪಯಣ ಹೋಗಿದ್ದು ನಮಗೆ ತಿಳಿಯದು. ನೀವು ಮನೆಯಲ್ಲಿರ ಬಹುದು ಎಂದುಕೊಂಡುದು ಗಾಬರಿಯಾಗಲು ಕಾರಣ. ಕ್ಷಮಿಸಿ, ಅದಾದುದು ಹೀಗೆ. ನಿಮ್ಮ ಮನೆಯಿಂದ ತಡೆಯ ಲಾರದ ದುರ್ವಾಸನೆ ಬರತೊಡಗಿತು. ನಮಗೆ ತಡೆಯು ವಂತಿರಲಿಲ್ಲ. ಪೋಲೀಸಿಗೆ ದೂರುಕೊಟ್ಟೆವು, ಪೋಲೀಸರು ಮತ್ತು ನಾವೆಲ್ಲರೂ ಯಾರದೋ ಕೊಲೆಯಾಗಿದೆ ಎಂದೇ ಭಾವಿಸಿದೆವು. ಹೆಣದ ದುರ್ವಾಸನೆಯಿಂದ ಎಲ್ಲರೂ ಸಂಬಲೇ ಬೇಕಾಯ್ತು ನಂಬಿದೆವು.

"ಪೋಲೀಸರು ಬಂದು ಬೀಗ ಒಡೆದು ಬಾಗಿಲು ತೆರೆದರು. ಒಳಗೆ ನೋಡಿದರೆ ಹೆಗ್ಗಣವೊಂದು ಸತ್ತು ಕೊಳೆತು ಹೋಗಿತ್ತು !

"ಮನೆಯಲ್ಲಿ ಯಾರ ಕೊಲೆಯೂ ಆಗಿಲ್ಲವೆಂದು ತಿಳಿದ ಮೇಲೆ ನಾವು ಹಾಯಾಗಿ ಉಸಿರಾಡಿದೆವು. ದೇವರು ದೊಡ್ಡವನು!"

ಒಮ್ಮೆಲೇ ಏರಿದ್ದ ಭಾವೋದ್ವೇಗ ಜರ್ರನೆ ಇಳಿಯಿತು.

— o —

ಮಾನವೀಯತೆ ನಿಸರ್ಗದಿಂ
ಒಡ ಮೂಡಿದುದಲ್ಲಂ
ಜಾತಿ ವರ್ಗದಿಂ ಒದಗುವುದಲ್ಲಂ
ಪರಮ ಕಲಾಭಿಜ್ಞತೆಯಿಂ
ಮೇಣ್ ಉಜ್ಜೀವನದಿಂ ಮೂಡಲಕ್ಕು.

— o —

# ನಿಮ್ಮಿ-ಶಮ್ಮಿ

ಶಾಲೆಯ ಗಂಟೆ ಬಾರಿಸಿತು ಠಣ್. ಠಣ್. ಠಣ್. ಠಣ್. ಠಣ್. ಠಣ್.

ಮಕ್ಕಳೆಲ್ಲಾ ಶಾಲೆಯಿಂದ ಬುಳು ಬುಳು ಹೊರ ಬಿದ್ದರು. ನಿಮ್ಮಿ-ಶಮ್ಮಿಯರನ್ನು ಕರೆದೊಯ್ಯಲು ರಂಗ ಬಂದಿದ್ದ. ಅವನು ಇಬ್ಬರ ಕೈಯನ್ನೂ ಹಿಡಿದು ನಡೆಯುತ್ತ ಹೇಳಿದ "ನೀವಿಬ್ಬರೂ ರಾಜಿಗೆ ಏನೆಲ್ಲಾ ತಿನ್ನಿಸುತ್ತೀರಿ ! ಆದಕ್ಕೀಗ ತುಂಬಾ ಕಾಹಿಲೆ !"

ಆ ನಾಯಿಯಲ್ಲಿ ಪಂಚಪ್ರಾಣ ಮಕ್ಕಳಿಗೆ. ಅದಕ್ಕೆ ಕಾಯಿಲೆಯೆಂದಾಗ ಸಂಕಟವಾಯಿತು. ಕೂಡಲೇ ಇಬ್ಬರೂ ಕೇಳಿದರು "ಏನಾಗಿದೆ ರಾಜಿಗೆ ?"

"ವಾಂತಿ ಮಾಡುತ್ತಿದೆ. ನೀರು ಸಹ ಮುಟ್ಟಲಿಲ್ಲ."

"ನೀನು ಏನಾದರೂ ತಿನ್ನಿಸುತ್ತಿ. ನಾವು ಕೊಡವುದು ಬ್ರೆಡ್-ಬಿಸ್ಕತ್ತು ಮಾತ್ರ."

"ನಾನು ಒಂದು ರೊಟ್ಟಿ ಕೊಟ್ಟಿದ್ದೆ, ಇನ್ನೇನೂ ಇಲ್ಲ."

“ನೀನು ಇನ್ನು ಮೇಲೆ ಏನೂ ಕೊಡಬೇಡ. ನಾನೇ ಕೊಡುವೆ.”

“ಹೌದು ಕಣೋ ! ನಿನ್ನಿಂದಲೇ ಅದಕ್ಕೆ ರೋಗ !”

ಹೋ ಹೋ ಹೋ ! ಹುಡುಗ ದೊಡ್ಡ ದನಿಯಲ್ಲಿ ನಕ್ಕು ಬಿಟ್ಟ.

“ನಗು. ಇನ್ನೂ ಗಟ್ಟಿಯಾಗಿ ನಗು !” ಸಿಟ್ಟಿನಿಂದ ನುಡಿದಳು ಶಮ್ಮಿ.

“ಅಲ್ಲ ಶಮ್ಮಿ, ನಿನ್ನ ಪುಸ್ತಕದಲ್ಲಿ ನಾಯಿ ಮರಿ ನಾಯಿ ಮರಿ ಏನು ಬೇಕು ? ಎಂಬ ಹಾಡಿದೆಯಲ್ಲ, ಅದನ್ನು ನಾನೂ ಕಲಿತಿರುವೆ. ರೊಟ್ಟಿ ಬೇಕೆ ? ಎಂದರೆ ತಲೆಯಾಡಿಸುತ್ತೆ ರಾಜಿ ! ಅದಕ್ಕೆ ಬೇಕು-ಬೇಡಗಳು ಅರ್ಥ ವಾಗುತ್ತದೆ. ಬಲು ಬುದ್ಧಿವಂತ ನಾಯಿ !”

ನಿಮ್ಮಿ ಬೆರಳು ಚೀಪುತ್ತಲೇ ಮನೆಯ ಕಡೆ ನೋಡಿ ದಳು. ಬಾಗಿಲಿನಲ್ಲಿ ಎಂದಿನಂತೆ ರಾಜಿ ಕಾದಿರಲಿಲ್ಲ. ಶಮ್ಮಿ ಅಲ್ಲಿಂದಲೇ ಕೂಗಿದಳು “ಅಮ್ಮಾ ! ಅಮ್ಮಾ !!”

“ಅಮ್ಮಾನೂ ಇಲ್ಲ ! ರಾಜೀನೂ ಇಲ್ಲ ! ಎಲ್ಲಿ ಹೋದರು ಸಾರಮ್ಮಾ ?”

ದಾದಿ ಹೊರ ಬಂದು ಹೇಳಿದಳು “ಅಮ್ಮ ನಾಯಿ ಯನ್ನು ಆಸ್ಪತ್ರೆಗೆ ಕರೆದೊಯ್ದಿದ್ದಾರೆ.”

ಆ ಸುದ್ದಿ ಕೇಳಿ ಮಕ್ಕಳ ಮುಖ ಬಣ್ಣಗೆಟ್ಟಿತು.

ಸಾರಮ್ಮ ಮಕ್ಕಳನ್ನು ಮುದ್ದಿಸಿ ಉಪಚಾರ ಮಾಡಿ ದರೂ ಮಕ್ಕಳು ಬಟ್ಟೆ ಬದಲಿಸಲೂ ಇಲ್ಲ. ಊಟ

ಮಾಡಲೂ ಇಲ್ಲ. ಇಬ್ಬರೂ ರಂಗನೊಡನೆ ಅಮ್ಮನ ಹಾದಿ ನೋಡುತ್ತ ಬಾಗಿಲಲ್ಲಿ ಕಾದು ಕುಳಿತರು.

ಢಣ್ !

"ಗಂಟೆ ಒಂದಾಯಿತು. ಮೊದಲು ಊಟ ಮಾಡಿ. ನೀವು ಹಸಿವು ತಾಳಲಾರಿರಿ." ರಂಗ ಒತಾಯಿಸಿದ. ಆದರೂ, ಮಕ್ಕಳು ಮಣಿಯಲಿಲ್ಲ. ಅಲ್ಲೇ ಚೂಪಗೆ ಕಾದು ಕುಳಿತರು.

ಢಣ್. ಢಣ್. ಎರಡು ಗಂಟೆ ಬಾರಿಸಿದಾಗಲೇ ತಾಯಿ ರಾಜಿಯೊಡನೆ ಹಿಂದಿರುಗಿದಳು.

"ಏನಾಗಿತ್ತಮ್ಮಾ ರಾಜಿಗೆ ?"

"ಹೊಟ್ಟೆಹುಳು ತುಂಬಿದೆಯಂತೆ ಔಷಧಿ ಕೊಟ್ಟಿದ್ದಾರೆ."

ತಾಯಿಯೊಡನೆ ಮಕ್ಕಳು ಒಳ ಹೋದರು. ಊಟ ಮುಗಿಯಿತು. ಅಲ್ಲೇ ಜಗಲಿಯಲ್ಲಿ ನಾಯಿಗೂ ಊಟ. ಅದು ತಟ್ಟೆ ಮೂಸಿ ನೋಡಿ ಸುಮ್ಮನೆ ಮಲಗಿತು. ಊಟದ ಗೋಜಿಗೆ ಹೋಗಲಿಲ್ಲ.

"ಬಿಸ್ಕತ್ತು ಕೊಡಲೇ ಅಮ್ಮಾ ?"

"ಈಗ ಬೇಡ ಮಗೂ ! ಊಟ ಮಾಡದ ಮೇಲೆ ಯಾವುದನ್ನೂ ತಿನ್ನುವುದಿಲ್ಲ ಅದು."

"ಸ್ವಲ್ಪ ಹಾಕಿ ನೋಡುವೆ."

ತಾಯಿಯ ಬಾಯಿಂದ ಉತ್ತರ ಬರುವುದರೊಳಗಾಗಿ ನಿಮ್ಮಿ ಬಿಸ್ಕತ್ತಿನ ಡಬ್ಬದೊಡನೆ ಓಡಿದುದನ್ನು ಕಂಡು ಶಮ್ಮಿಯೂ ಹಿಂಬಾಲಿಸಿದಳು. ಇಬ್ಬರೂ ಅದರ ಬಾಯಿಗೆ ಬಿಸ್ಕತ್ತು ತುರುಕ್ಕಿದ್ದೂ ತುರುಕಿದ್ದೆ ! ಇವರು ತುರುಕಿ

ದಂತೆಲ್ಲಾ ಅದು ಉಗುಳಿತು. ಕೊನೆಗೆ ಉಳಿದ ಒಂದೆರಡು ಬಿಸ್ಕತ್ತನ್ನು ತಾವೇ ತಿಂದರು ಮಕ್ಕಳು.

ಅದೇ ವೇಳೆಗೆ ಅಲ್ಲಿಗೆ ಬಂದ ರಂಗ "ಇಬ್ಬರೂ ಕೊಳಕು ಕೈಯಲ್ಲಿ ತಿನ್ನುತಿದ್ದೀರಿ. ಕೈ ತೊಳೆದು ತಿನ್ನಬೇಕು ಎಂದಿಲ್ಲವೇ ಅಮ್ಮಾ ?"

ಹಾಂ ! ಹಾಗೊಂದು ಮಾತು ಹೇಳಲು ಅವಕಾಶ ಸಿಕ್ಕಿದ್ದು ಹೆಮ್ಮೆ ರಂಗನಿಗೆ. "ಕೈ ತೊಳೆಯೋಣ ಬನ್ನಿ ಸಿಂಕಿಗೆ." ಎಂದು ಕೈ ಹಿಡಿದು ಮಕ್ಕಳನ್ನು ಎಬ್ಬಿಸ ತೊಡಗಿದ. ಅಷ್ಟೊಂದು ಬಿಸ್ಕತ್ತು ಹಾಳಾದುದು ಅವನಿಗೆ ಸಂಕಟ, ಮಕ್ಕಳು ಅವನೊಂದಿಗೆ ಹೋಗದೆ ಮೊಂಡು ಹಿಡಿದು ಕುಳಿತರು. ರಂಗ ಅಲ್ಲಿಂದಲೇ ಕರೆದು ಹೇಳಿದ "ಅಮ್ಮಾ ! ಇಬ್ಬರೂ ಕೈತೊಳೆಸಿಕೊಳ್ಳುವುದಿಲ್ಲ."

ತಾಯಿ ಮಕ್ಕಳನ್ನು ಕರೆದೊಯ್ದು ಕೈ ತೊಳೆಸಿದ ನಂತರ, ರಾಜಿಯನ್ನು ಗೂಡಿನಲ್ಲಿ ಕೂಡಿ ಬಟ್ಟಲಲ್ಲಿ ನೀರು ಮುಂದಿಟ್ಟಳು. ಮಕ್ಕಳಿಗೆ ತಾಯಿ ಹಾಗೆ ಮಾಡಿದ್ದು ಸರಿ ಎನಿಸಲಿಲ್ಲ. ಮೈ ಜಡ್ಡಾಗಿರುವಾಗ ಅದು ಓಡಾಡಿಕೊಂಡಿರುವುದು ಲೇಸು. ನಾವು ಜ್ವರ ಬಂದಾಗ ಓಡಾಡುವುದಿಲ್ಲವೇ ಅದಕ್ಕೇಕೆ ನಿರ್ಬಂಧ ? ಎಂಬುದು ಮಕ್ಕಳ ಪರಿತಾಪ.

ಮರುದಿನ ಮಕ್ಕಳು ಶಾಲೆಯಿಂದ ಮನೆಗೆ ಬಂದಾಗ ರಾಜಿ ಪ್ರಾಣ ಕಳೆದುಕೊಂಡು ಜಡವಾಗಿ ಬಿದ್ದಿತ್ತು. ಮಕ್ಕಳಿಗೆ ಅದರ ಸಾವು ಅರ್ಥವಾಗಿರಲಿಲ್ಲ.

"ಇನ್ನಿದು ಎದ್ದು ಓಡಾಡುವುದಿಲ್ಲವೇ ರಂಗ ?"

ರಂಗ ಗೋಣು ಆಡಿಸುತ್ತ ಉತ್ತರಿಸಿದ "ಅದು ಸತ್ತಿದೆ. ಇಂದಿಗೆ ಮುಗಿಯಿತು ಅದರ ಕಥೆ! ಅಮ್ಮ ಅದನ್ನು ಹೂಳಲು ಹೇಳಿದ್ದಾರೆ."

"ಅಂದರೆ...?"

"ನೆಲದಲ್ಲಿ ಗುಳಿ ತೋಡಿ ಮಣ್ಣು ಮುಚ್ಚುವುದು."

"ಛೆಃ! ಅದಕ್ಕೆ ನೋವಾಗದೇ ರಂಗ ?"

"ಪ್ರಾಣ ಇದ್ದರಲ್ಲವೇ ನೋವು ?"

"ಹಾಗಾದರೆ ನಮಗಿನ್ನು ನಾಯಿ ಇಲ್ಲ ?"

"ಬೇರೆ ತಂದರಾಯಿತು."

"ಉ.....ಊ.........ಬೇರೆ ಬೇಡ."

"ಬೇಡ ಎಂದರೆ ನಿಮಗೆ ನಾಯಿ ಇಲ್ಲ" ಕೈ ತಿರುಗಿಸಿದ ರಂಗ.

"ಏನು ಮಾಡಿದರೆ ಇದು ಎದ್ದು ಓಡಾಡುತ್ತದೆ ?"

"ಇನ್ನದು ಏಳುವುದಿಲ್ಲ. ಅಮ್ಮನಿಗೆ ಹೇಳಿ. ಹೊಸ ನಾಯಿ ತರಲಿ."

ಇಬ್ಬರು ಮಕ್ಕಳ ಕಣ್ಣುಗಳಲ್ಲೂ ನೀರಾಡಿತು, ರಂಗ ಇಬ್ಬರನ್ನೂ ಮುದ್ದಿಸಿ "ನಾನು ಹಿತ್ತಿಲಲ್ಲ ಗುಳಿ ತೋಡುವೆ! ಬಂದು ನೋಡಿ," ಎಂದು ಹೊರಗಡೆ ಕರೆದೊಯ್ದು ಪಿಕಾಸಿ ಹಿಡಿದು ಗುಳಿ ತೋಡ ತೊಡಗಿದ. ಹೊರ ಬೀಳುವ ಮಣ್ಣು-ಕಲ್ಲುಗಳಲ್ಲಿ ಕೈಯಾಡಿಸುತ್ತ ಆಟ ಆಡುವಾಗ ಮಕ್ಕಳಿಗೆ ದುಃಖ ಹಿಂಜರಿಯಿತು. ಅವನು ಗುಳಿ ತೋಡಿದ ನಂತರ ನಾಯಿಯನ್ನು ತಂದು ಹಾಕುವಷ್ಟರಲ್ಲಿ ಶಮ್ಮಿ ಕೂಗಿ

ದಳು "ಅದರ ಹಾಸಿಗೆ ತಂದು ಹಾಕು ! ಈ ಕಲ್ಲು ಮಣ್ಣು ಗಳಲ್ಲಿ ಹೇಗೆ ಮಲಗುತ್ತೆ ಅದು ?"

ರಂಗ ಹಾಸಿಗೆ ತಂದು ಹಾಸಿ ನಾಯಿಯ ಶವವನ್ನು ತಂದು ಮಲಗಿಸಿದ. ನಿಮ್ಮಿ ಅದರ ತೆರೆದ ಕಣ್ಣುಗಳನ್ನು ನೋಡುತ್ತ "ಹೊದ್ದಿಕೆ ಬೇಡವೇನೊ ?" ಎಂದಳು.

"ಹೊದ್ದಿಕೆ ಇಲ್ಲವಲ್ಲಾ" ಕಣ್ಣರಳಿಸಿದ ರಂಗ.

ಅಲ್ಲೇ ತಂತಿಯ ಮೇಲೆ ಆರಿಸಲು ಹಾಕಿದ್ದ ಹೊಸ ಟರ್ಕಿ ಟವಲ್ಲು ಕಣ್ಣಿಗೆ ಕಂಡಿತು. ಓಡಿ ಹೋಗಿ ಅದನ್ನೇ ತಂದು "ಹೊದಿಸು" ಎಂದಳು.

"ಅಮ್ಮ ಕೇಳಿದರೆ ?"

"ನಾನೇ ಹೇಳುವೆ. ನೀನು ಹೊದಿಸು."

ರಂಗ ಟವಲ್ಲು ಹೊದಿಸಿ ಮೇಲೆ ಮಣ್ಣೆಳೆಯುವಾಗ ಮಕ್ಕಳ ಮನಸ್ಸು ಮಂಜಿನಂತೆ ಕರಗಿ ಮತ್ತೆ ಕಣ್ಣುಗಳಲ್ಲಿ ನೀರಾಡಿತು. ಮಕ್ಕಳ ದುಃಖವನ್ನು ನೋಡಿ, ಮರೆಸಲೆಂದು ನುಡಿದ ರಂಗ,

"ಹೋಗಿ, ಗಿಡದಿಂದ ಹೂ ಕಿತ್ತು ತನ್ನಿ. ಇವಕ್ಕೆ ಸಮಾಧಿ ಮಾಡಿ ಪೂಜಿಸಬೇಕಲ್ಲ ?"

"ಹೌದೇ ?"

"ಹೌದು. ಬೇಗ ತನ್ನಿ."

ಮಕ್ಕಳು ಹೂ ಕಿತ್ತು ತರುವುದರೊಳಗಾಗಿ ರಂಗ ಉದ್ದಕ್ಕೆ ಮಣ್ಣೇರಿಸಿ ಸಮಾಧಿ ನಿರ್ಮಿಸಿದ್ದ. ಮಕ್ಕಳು ಹೂ ತಂದರು. ರಂಗ ಅದರೊಂದಿಗೆ ತಾನೂ ಸಮಾಧಿಗೆ

ಹೂ ಮುಡಿಸಿದ. ಪೂಜೆಯ ದೆಸೆಯಿಂದ ದುಃಖ ಮರೆತು ಹೋಯಿತು ಮಕ್ಕಳಿಗೆ.

ರಂಗ ಹೇಳಿದ "ಪೂಜೆ ಮಾಡುವಾಗ ಒಂದು ಹಾಡು ಪೇಳ ಬೇಡವೇ? ಇಬ್ಬರೂ ಹಾಡು ಹೇಳಿ !"

"ಹಾಂ ! ಯಾವ ಹಾಡು ಹೇಳೋಣ ?"

"ಆವೊತ್ತು ಶಾಲೆಯಲ್ಲಿ ಹೇಳಿದ್ದರಲ್ಲ, ಅದು ನೆನಪಿದೆಯೆ ?"

ಇಬ್ಬರೂ ಚಪ್ಪಾಳೆ ತಟ್ಟುತ್ತ ಹಾಡಿದರು,

"ಹ್ಯಾಪಿ ಬರ್ತ್ ಡೇ ಟು ಯೂ ! ಹ್ಯಾಪೀ ಬರ್ತ್ ಡೇ ಟು ಯೂ !"

ರಂಗ ಹಲ್ಕಿರಿದು ನಗುತ್ತ "ಚೆನ್ನಾಗಿದೆ !" ಎಂದ.

—o—

ಲೋಕದಲಿ ಅಲ್ಲದುದ ನುಡಿದು
ಸಲ್ಲದವರೆನಿಸದೆ ಬದುಕಿನಲಿ
ಬಲ್ಲಿದನಾಗಿ ಬಾಳುವುದು ಲೇಸು !
ಕ್ಷುಲ್ಲಕತನದಿಂ ಬಾಳ್ಗೆಡಿಸಿ
ಪೊಲ್ಲ ಜೀವಿಗಳಾಗದೆ ನಿಜದಿ
ಲೋಕ ವಂದ್ಯರಾಗುವುದು ಲೇಸು !

—o—

# ಶಾಂತಿಯುದ್ಧ

ಪ್ರಿಯ ಕುಮಾರ್ !

ಇಂದಿಗೆ ನಮ್ಮ ಕಾರ್ಯಾಚರಣೆ ಮುಗಿಯಿತು. ನಾವು ವಿಜಯಿಗಳಾದೆವು !

ಈ ಕಾಗದವನ್ನು ಎಷ್ಟು ಸಂತೋಷದಿಂದ ಬರೆಯುತ್ತಿರುವೆ ಎಂಬುದನ್ನು ತಿಳಿಸಿ ಹೇಳಿ ಪೂರೈಸಲಾರೆ. ನಾವು ನಡೆಸಿದ್ದು ರಕ್ತಪಾತವಿಲ್ಲದ ಶಾಂತಿಯುದ್ಧ ! ಅದನ್ನಂತೂ ಖಂಡಿತ ನಿನಗೆ ತಿಳಿಸಿಕೊಡಲೇ ಬೇಕು. ಶಾಲೆಗಳಲ್ಲಿ ಗುದ್ದಾಡುವ ಹುಡುಗರಿಗೆ 'ಶಾಂತಿ' ಎಂದರೇನೆಂಬುದು ಅರ್ಥವಾಗುವುದಿಲ್ಲವೇನೋ ಎಂಬಷ್ಟು ಪರಿಸ್ಥಿತಿ ಗಂಭೀರವಾಗಿದೆ ನಮ್ಮಲ್ಲಿ.

ವಿಶ್ವಸಂಸ್ಥೆಯ ಧ್ವಜದಡಿಯಲ್ಲಿ ಹದಿನೆಂಟು ರಾಷ್ಟ್ರಗಳ ಸೈನಿಕರ ಬೆಟಾಲಿನ್-ಗಳು ಇಲ್ಲಿ ಕೂಡಿವೆ. ಕಗ್ಗಾಡಿನ ಪ್ರದೇಶ. ಬೆಟ್ಟ ತಪ್ಪಲಿನಲ್ಲಿ ನಮ್ಮ ಬೀಡು. ಭಾರತೀಯ ಸೈನಿಕರ ತಂಡ ಯಾವ ದೇಶದ ತಂಡಕ್ಕೂ ಕಡಿಮೆಯಾದುದಲ್ಲ! ಶೌರ್ಯದಲ್ಲಿ, ಬುದ್ಧಿಯಲ್ಲಿ ನಾವು ಎಲ್ಲರ ಪ್ರಶಂಸೆಗೂ ಪಾತ್ರರಾದವರು ಎಂದರೆ ನಿನಗೆ ಹೆಮ್ಮೆಯಷ್ಟೆ ?

ನಮ್ಮ ಯುದ್ಧ ಆರಂಭವಾಗಿ ಮುಕ್ತಾಯಗೊಂಡ ಬಗೆಯನ್ನು ಚುಟುಕಾಗಿ ಬರೆಯುವೆ.

ಅಂದು, ಶೋಂಬೆಯ ಭಟರು ನಮ್ಮ ಶಿಬಿರಪ್ರದೇಶದ ವಿಮಾನ ನಿಲ್ದಾಣವನ್ನು ಆಕ್ರಮಿಸಿಕೊಂಡು ನಮ್ಮನ್ನು ಪ್ರತ್ಯೇಕಗೊಳಿಸಿ, ನಮ್ಮಕಡೆ ಗುಂಡುಗಳ ಮಳೆ ಕರೆದರು. ಅದು ತೀರ ಅನಿರೀಕ್ಷಿತವಾದುದರಿಂದ ನಾವು ತಯಾರಿರಲಿಲ್ಲ ಕೂಡ. ಆ ತಕ್ಷಣವೇ ನಾವು ಕೋವಿಗಳನ್ನು ತೆಗೆದುಕೊಂಡು ಹೊರಬಿದ್ದೆವು. ಅದು ನಗರ ಪ್ರದೇಶ. ಸುತ್ತಮುತ್ತಲೆಲ್ಲ ಹೆಂಗಸರು-ಮಕ್ಕಳ ದಂಡೇ ಇದೆ. ಎಲ್ಲರೂ ಕೈಯೆತ್ತಿ ನಮ್ಮ ವಿರುದ್ಧ ಘೋಷಣೆಗಳನ್ನು ಕೂಗುತಿದ್ದಾರೆ. ಗುಂಡು ಹಾರಿಸುವುದೆಂದರೆ ಮುಗ್ಧ ಹೆಂಗಸರು ಮಕ್ಕಳ ಮಾರಣ ಹೋಮ ! ಅಪಪ್ರಚಾರದ ಮೂಲಕ ಅವರನ್ನು ನಮ್ಮ ವಿರುದ್ಧ ಎತ್ತಿಕಟ್ಟಿದ್ದರು ಶೋಂಬೆಯ ಸೈನಿಕರು. ಹೆಂಗಸರು ಮಕ್ಕಳ ದರ್ಶನ ಮಾತ್ರದಿಂದ ನಾವು ಸ್ವಲ್ಪ ಎದೆಗುಂದಿದ್ದು ನಿಜ. ಕೋವಿ ಹಿಡಿದರೂ ಗುಂಡು ಹಾರಿಸಲಾಗಲಿಲ್ಲ.

ಧೂರ್ತ ಸೈನಿಕರು ನಮ್ಮ ಕಡೆಗೆ ನುಗ್ಗಿ ಬಂದೇ ಬಿಟ್ಟರು! ಇವರ ಕೀಟಲೆ ತುಂಬಾ ಅಸಹನೀಯವಾಗಿದ್ದರೂ ನಾವು ಲವಲೇಶವೂ ತಾಳ್ಮೆಗೆಡಲಿಲ್ಲ. ಧೈರ್ಯದಿಂದ ಗಾಳಿಯಲ್ಲಿ ಗುಂಡು ಹಾರಿಸಿದೆವು. ನಮ್ಮ ಕಣ್ಮುಂದೆಯೇ ನಮ್ಮದೊಂದು ಹೆಲಿಕಾಪ್ಟರನ್ನು ಹೊಡೆದು ಉರುಳಿಸಿದರು! ನಮಗೆ ಆಹಾರ ಸಾಮಗ್ರಿಯನ್ನು ಹೊತ್ತು ತಂದ ಅದು ನೆಲಕ್ಕೆ ಇಳಿಯುವುದರಲ್ಲಿತ್ತು. ಅದರಲ್ಲಿದ್ದ ಲೆಫ್ಟಿನೆಂಟ್ ಭಗವಾನ್ ಸಿಂಗ್ ನಾರಂಗ್ ಹತರಾದರು ! ಉಳಿದವರ

ಮೇಲೆ ಶೋಂಬೆ ಸೈನಿಕರು ನುಗ್ಗಿದರು. ಇನ್ನೇನು, ನಾವೂ ಗುಂಡು ಹಾರಿಸಬೇಕು. ಅಷ್ಟರಲ್ಲೆ ಮುಂದಾದ ನಮ್ಮ ದಳಪತಿ ಕೈಯಲ್ಲಿ ಬರೀ ಲಾಠಿ ಹಿಡಿದು ವೈರಿಗಳೆಡೆಗೆ ಸಾಗಿ ಉಚ್ಚದನಿಯಲ್ಲಿ ಕೂಗಿ ಹೇಳಿದ "ಕೇಳಿ, ಸೈನಿಕರೆ ! ಈವತ್ತು ಡಿಸೆಂಬರ್ ೨೫ ! ಕ್ರಿಸ್‌ಮಸ್ ! ನೆನಪಿಡಿ ! ಹಿಡಿದವರನ್ನು ಬಿಟ್ಟು ಬಿಡಿ ! ಇಂದು ರಕ್ತಪಾತವಾಗಬಾರದು !"

ದಳಪತಿಯ ಸಮಯೋಚಿತ ಧೀರವರ್ತನೆಯಿಂದ ಶತ್ರುಗಳು ತಬ್ಬಿಬ್ಬಾದರು. ಖೈದಿಗಳನ್ನು ಬಿಟ್ಟುಕೊಟ್ಟು ಹಿಂದಿರುಗಿದರು !

ನಮ್ಮ ದಳಪತಿ ಹಿಂದೊಮ್ಮೆ ಚೀಣಾ ದೇಶದ ಆಕ್ರಮಣದ ಹೋರಾಟದಲ್ಲಿ ಭಾಗವಹಿಸಿದ್ದಾಗಲೂ ಇದೇ ರೀತಿಯ ಉಪಾಯ ಹೂಡಿದ್ದರು.

"ಕೇಳಿ ! ಸೋದರರೇ ! ಇಂದು ಬುದ್ಧಪೂರ್ಣಿಮೆ ! ಈದಿನ ರಕ್ತಪಾತವಾಗಬಾರದು ! ಹಿಂದಿರುಗಿ ಹೋಗಿ !" ಎಂದು ಜೋರಿನಿಂದ ಕೂಗಿ ಹೇಳಿದ್ದರು.

ನಿಜಕ್ಕೂ ಆದಿನ ಯುದ್ಧಸ್ತಂಭನವಾಯಿತು ! ಚೀನೀಯರ ಮನಸ್ಸನ್ನೂ ಗೆದ್ದಿದ್ದರು ಇದೇ ದಳಪತಿ. ಒಂದು ದಿನದ ಯುದ್ಧಸ್ತಂಭನದಿಂದ ಎಷ್ಟೋ ಸೈನಿಕರ ಜೀವ ಉಳಿಯಿತು !

ಹೀಗೆ ಶಾಂತಿಯುದ್ಧವನ್ನು ಹೂಡಿದವರು ನಾವು.

ಡಿಸೆಂಬರ್ ತಿಂಗಳ ಕೊನೆಯ ದಿನ ಪುನಃ ಕದನ ಆರಂಭ. ಶೋಂಬೆ ಭಟರು ಸುಮ್ಮನೆ ಕೂಡುವವರಲ್ಲ. ಅವರಿಗೆ ಶಾಂತಿಗಿಂತ ಧೈರ್ಯ ಪ್ರದರ್ಶನ ವಿಶೇಷ. ತೆರೆಮರೆ

ಯಲ್ಲಿ ಅವರ ಯುದ್ಧ ಸನ್ನದ್ಧತೆ ನಡೆದೇ ಇತ್ತು. ಅವರ ಚಟುವಟಿಕೆಯನ್ನು ಹತ್ತಿಕ್ಕುವುದಕ್ಕಾಗಿ ಗೂರ್ಖಾ ಸೈನಿಕರು ಧಾಳಿ ಮಾಡಿದರು. ನಮಗೆ ನಗರಗಳನ್ನು ವಶಪಡಿಸಿ ಕೊಳ್ಳುವುದರ ಹೊರತು ಬೇರೆ ಉಪಾಯ ಕಾಣಲಿಲ್ಲ. ಹೆಜ್ಜೆ ಹೆಜ್ಜೆಗೂ ಆ ಭಟರೊಡನೆ ಹೋರಾಟ. ಮೊಟ್ಟ ಮೊದಲಿಗೆ ಕಟಾಂಗ ರೇಡಿಯೋ ಕೇಂದ್ರವನ್ನು ಕೈವಶ ಪಡಿಸಿಕೊಂಡಿದ್ದಾಯ್ತು. ನಮ್ಮವರು ವೀರಾವೇಶದಿಂದ ಮುಂದುವರಿದಂತೆಲ್ಲಾ ಶೋಂಬೆ ಭಟರು ಹಿಂಜರಿಯ ತೊಡಗಿದರು. ಎರಡೂ ಕಡೆ ರಕ್ತಪಾತವಾಗಲಿಲ್ಲ. ಅದೊಂದು ವಿಶೇಷ.

ಅಲ್ಲದೆ, ಗಣಿಕೇಂದ್ರಗಳಾದ ಜಾಡೋತ್‌ವಿಲ್ ಮತ್ತು ಕೊಲ್ವೈಜಿಗಳಲ್ಲಿ ಹಾಗೂ ಇನ್ನೂ ಕೆಲವು ನಗರಗಳಲ್ಲಿ ವಿದೇಶೀ ಭಟರ ಜಮಾವಣೆಯಿದ್ದುದರಿಂದ ನಾವು ಕೈ ಕಟ್ಟಿ ಕೂಡುವಂತಿರಲಿಲ್ಲ. ನಮ್ಮ ಪಡೆಗಳು ಇನ್ನೂ ಮುಂದು ವರಿದರೆ ತಮ್ಮ ಗಣಿಗಳನ್ನು ತಾವೇ ನಾಶಗೊಳಿಸುವುದಾಗಿ ಸೈನಿಕರು ಸಾರಿದರು ! ನಾವು ಮುಂಬರಿವ ಹಾದಿಯಲ್ಲಿದ್ದ ಲುಫಿರಾ ಸೇತುವೆಯನ್ನು ಧ್ವಂಸಗೊಳಿಸಿದ್ದಾರೆ. ನಮ್ಮ ಮುನ್ನಡೆಗೆ ಅದೊಂದು ತಡೆಗಟ್ಟೆ. ಅಂದಮೇಲೆ, ನಮ್ಮ ಇಂಜಿನಿಯರ್ ತಂಡಕ್ಕೆ ಸೇತುವೆ ದುರಸ್ತಿಗೊಳಿಸುವ ಕಾರ್ಯ ಭುಜವೇರಿತು. ದುರಸ್ತಿಯ ನಂತರ ಜೋಡತ್ ವಿಲ್ ರಸ್ತೆಯಲ್ಲಿ ಮುನ್ನಡೆದು ಸುಲಭವಾಗಿ ತುಂಬ್ವೆ ನಗರ ವನ್ನು ಕೈವಶಮಾಡಿಕೊಂಡೆವು. ನಮ್ಮ ಧೀರತನವನ್ನು ನೋಡಿಯೇ ಅವರು ಹಿಂಜರಿದರೇನೋ ಯಾರೂ ವಿರುದ್ಧದ

ಸೊಲ್ಲೆತ್ತಲಿಲ್ಲ. ಮರುದಿನ ಲುಫಿರಾ ನದಿಯನ್ನು ದಾಟಿ ಜಾಡೋತ್‌ವಿಲ್ ಪ್ರವೇಶಿಸಿದಾಗ ಅಲ್ಲಿ ನಾಲ್ಕೈದು ಸಾವಿರ ಮಂದಿ ಸೈನಿಕರಿದ್ದುದು ಕಂಡು ಬಂತು. ನಮ್ಮ ದಳಪತಿ ಜೀಪನ್ನೇರಿ ಅಂಗರಕ್ಷರೊಡನೆ ಹಾಗೂ ಒಂದು ಕೈ ಕೋಲಿ ನೊಡನೆ ನಗರ ಪ್ರವೇಶ ಮಾಡಿದರು. ಆ ಅನನ್ಯ ಧೀರ ಪ್ರದರ್ಶನದಿಂದ ಶೋಂಬೆ ಸೈನಿಕರು ನಿಸ್ತೇಜರಾದರು !

ಅಲ್ಲಿಂದ ಕೊಲ್ವೆಜಿಗೆ ಪಯಣ. ಆ ಶಹರವೂ ರಕ್ತ ಪಾತವಿಲ್ಲದೆ ಶಾಂತಿಯುದ್ಧದಿಂದ ನಮ್ಮ ಪಡೆಗಳ ವಶ ವಾಯಿತು !

ಇಂದು ಎಂತಹ ಸುದಿನ ? ಎಲ್ಲಾ ಕಡೆಯೂ ಶಾಂತಿ ಯುದ್ಧ ಏರ್ಪಡಲಿ !

ಪ್ರಿಯ ಕುಮಾರ್ ನಿನಗೆ ಮತ್ತೊಮ್ಮೆ ಬರೆಯುವೆ.

ನಿನ್ನ ಪ್ರೀತಿಯ ತಂದೆ.
ಕೃಷ್ಣ ಕೊಠಾರಿ.
ಭಾರತದ ಬೆಟಾಲಿಯನ್ ಸೈನಿಕ.

—o—

# ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೧) ಜೀವನಗಂಗಾ
೨) ಡಾ|| ಅಘೋರ
೩) ಡಾ|| ಕಮಲೇಶ್
೪) ವಂದೇ ಮಾತರಂ
೫) ಅನಂತಾನಂತದೆಡೆಗೆ

(ಕಥಾ ಸಂಕಲನ)

೬) ಶ್ರೀಮುಖಿ
೭) ಬಹುರತ್ನಾವಸುಂಧರಾ
೮) ರತ್ನಗರ್ಭಾವಸುಂಧರಾ
೯) ವೈಶಾಖೀ ಪರ್ವ
೧೦) ಫಾಲ್ಗುಣೀ ಪರ್ವ

(ಕವಿತಾ ಸಂಕಲನ)

೧೧) ಪೂಜಾವಸಾನ ಸಮಯೋ....!
೧೨) ಧ್ಯಾನಾವಸಾನ ಸಮಯೋ....!

(ಪೌರಾಣಿಕ ನಾಟಕ)

೧೩) ಪುಣ್ಯಪಯೋನಿಧಿ
೧೪) ಪುಣ್ಯಾಭಿಸಾರ

(ಸಾನೆಟ್ಸ್‌ಗಳು)

೧೫) ತರಂಗಿಣಿ

(ಇವುಗಳ ಪ್ರತಿಗಳು ಮುಗಿದಿವೆ)

(ಕಥಾ ಸಂಕಲನ)

ತಿದ್ದಿದ ಎರಡನೆಯ ಮುದ್ರಣ

೧೬) ರಮಣೀಮಣಿ
೧೭) ಲಿಯೋನಾ
೧೮) ಶ್ರೀಹರ್ಷಲಾ
೧೯) ಸುಧಾಮಣಿ (ಅಚ್ಚಿನಲ್ಲಿ)

## ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೨೦) ಮನೋನ್ಮಣಿ

೨೧) ಸಂತ್ರಾಸಿನಿ

೨೨) ಆಸೆಯ ಸುಳಿಯಲ್ಲಿ

(ಕವಿತಾ ಸಂಕಲನ)

೨೩) ಗಗನ ಕುಸುಮ

೨೪) ಜೀವನ ಕುಸುಮ

೨೫) ಕಸ್ತೂರಿ ಮಾಲಿಕಾ

೨೬) ಮಂದಾರ ಮಾಲಿಕಾ

೨೭) ಚಂಪಕ ರಾಜಿ

೨೮) ನಾದ ಬಿಂದು

೨೯) ವಿಜಯ ಗಾಥಾ

೩೦) ಗಾನತೀರ್ಥ

೩೧) ಬಕುಳ ರಾಜಿ (ಅಚ್ಚಿನಲ್ಲಿ)

೩೨) ಕಲ್ಯಾಣ ಭಾರತಿ (ಅಚ್ಚಿನಲ್ಲಿ)

(ಸಂಜೀವನ ಕಾವ್ಯ)

೩೩) ರಾಗಾನುರಾಗಿಣಿ

೩೪) ಉತ್ತರೋತ್ತರಣಿ

೩೫) ಮಂಗಳ ಭಾರತಿ

(ಗದ್ಯ ಕಾವ್ಯ)

೩೬) ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೩೭) ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೩೮) ದೂರ ದೇಶದಲ್ಲಿ

೩೯) ಬೆಳದಿಂಗಳ ರಾತ್ರಿ

೪೦) ವಿಶೇಷ ಸುದ್ದಿ

೪೧) ರಂಗನ ಸಾಹಸ

೪೨) ಓಹಿಯೋಜ ಸರೋವರ

೪೩) ಕೌಶಿಕನ ಗೊಂಬೆ (ಅಚ್ಚಿನಲ್ಲಿ)

---

ಲಕ್ಷ್ಮೀ ಪ್ರಕಾಶನ

7, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು–560 025